# ವಸಂತ ಚಂದನ

(ನೃತ್ಯೋತ್ಸವರೂಪಕ)

ಸ್ವರಪ್ರಸ್ತಾರದೊಡನೆ

**ಪು. ತಿ. ನರಸಿಂಹಾಚಾರ್**



ಹೇಮಾವತೀ ಪ್ರಕಾಶನ ಮಂದಿರ

ಗೊರೂರು

# ವಸಂತ ಚಂದನ

(ನೃತ್ಯೋತ್ಸವರೂಪಕ)

ಪು. ತಿ. ನರಸಿಂಹಾಚಾರ್

ಹೇಮಾವತೀ ಪ್ರಕಾಶನ ಮಂದಿರ
ಗೊರೂರು

# ಪ್ರಸ್ತಾವ

ನನ್ನ "ಈಚಲು ಮರದ ಕೆಳಗೆ" ಎಂಬ ಪ್ರಬಂಧ ಸಂಗ್ರಹದಲ್ಲಿ ಕಂಡುಬರುವ "ವಸಂತಚಂದನೋತ್ಸವ"ದ ಹಂಬಲು ಈ ಸಂಗೀತ ಚಿತ್ರದಲ್ಲಿ ತುಂಬಿದೆ. ಈ ಹೊಸ ಪ್ರಯೋಗದ ಯಶಸ್ಸು ಆಕಾಶವಾಣಿಯ ಶ್ರೀ ಎಸ್. ಎನ್. ಶಿವಸ್ವಾಮಿಯವರಿಗೂ ಆ ಸಂಸ್ಥೆಯವರು ಆರಿಸಿದ ಕಲಾವಿದರಿಗೂ ಸಂಪೂರ್ಣವಾಗಿ ಸಲ್ಲತಕ್ಕದ್ದು. "ಹರಿಣಾಭಿಸರಣ"ವೆಂಬ ಸಂಗೀತ ರೂಪಕದ ಪ್ರಯೋಗದಲ್ಲಿ ನನಗೆ ಆಕಾಶವಾಣಿಯ ಕಲಾವಿದರ ಮತ್ತು ಅದರ ನಿರ್ದೇಶಕರ ಸಮೀಪ ಪರಿಚಯ ವಾಯಿತು. ನಾನು ಬಯಸುತ್ತಿದ್ದಂಥ ಪರಿಕರ್ಮಕುಶಲರು ನನಗಲ್ಲಿ ದೊರೆತರು. ಆ ರೂಪಕದ ನೇಪಥ್ಯಾಭ್ಯಾಸದಲ್ಲಿ ಅವರು ತೋರಿದ ಉತ್ಸಾಹವೂ ಆಸಕ್ತಿಯೂ ನನಗೆ "ವಸಂತಚಂದನ"ದ ಬರಹಕ್ಕೆ ಸ್ಫೂರ್ತಿಯನ್ನು ಕೊಟ್ಟವು; "ವಸಂತ ಚಂದನ"ದ ಸಂತೋಷ "ಹಂಸದಮಯಂತಿ"ಗೆ. ಹಾಡು ಒಳಗೊಳಗೇ ನವೆದು ಹೋಗುವುದಾಗಲಿ ಅಥವಾ ಹೊರತೋರಿ ತನ್ನ ಆವಿರ್ಭಾವದಿಂದ ಜನವನ್ನು ಉಲ್ಲಾಸ ಗೊಳಿಸುವುದಾಗಲಿ ಕವಿಗಿಂತಲೂ ಹೆಚ್ಚಾಗಿ ಸರಸಸಹೃದಯರನ್ನು ಅವಲಂಬಿಸಿದೆ ಎನ್ನುವುದಕ್ಕೆ ಈ ಗೀತರೂಪಕಗಳು ಸಾಕ್ಷಿ. ಸಹೃದಯರ ಕುಶಲಾಸಕ್ತಿಯಿಂದಲೇ ಕವಿಗೆ ಸ್ಫೂರ್ತಿ, ಅನ್ಯಥಾ ಅಲ್ಲ ಎಂಬುದು ನನಗೆ ಪದೇ ಪದೇ ಹೀಗೆ ಅನುಭವಕ್ಕೆ ಬರುತ್ತಿದೆ. ನನ್ನ ಎಚ್ಚರದ ಕನಸುಗಳಲ್ಲಿ ಯಾರೋ ಎಲ್ಲೋ ಹಾಡಿದಂತೆ ಬಗೆಯಲ್ಲಿ ಅಲೆದ ಈ ಹಾಡುಗಳು ನನ್ನ ಅಹಂಕಾರಮಾಲಿನ್ಯದಿಂದ ಮುಕ್ತವಾಗುವುದಕ್ಕೋ ಎಂಬಂತೆ ಕುಶಲಕಲೆಯಲ್ಲಿ ನುರಿತವರಿಂದ ಗ್ರಾಹ್ಯವಾಗಿ, ಸುಪರಿಷ್ಕೃತ ಕಂಠಗಳಲ್ಲೂ ವಾದ್ಯಗಳಲ್ಲೂ ವಿಷಯಸ್ಥಲದಲ್ಲಿ ರೂಪುಗೊಂಡು, ಕಿವಿಗೆ ಮರಳಿ ಬಿದ್ದು ಯಂತ್ರ ಗ್ರಸ್ತವಾಗುವ ಮೊದಲು ನನ್ನನ್ನು ಬಹುವಾಗಿ ಉತ್ತೇಜಿಸಿವೆ. ಈ ಸಂಮೋದವನ್ನು ಕೊಟ್ಟ ಕಲಾವಿದರಿಗೂ ಆಕಾಶವಾಣಿಯ ಅಧಿಕಾರವರ್ಗಕ್ಕೂ ನಾನು ಕೃತಜ್ಞ ನಾಗಿದ್ದೇನೆ.

"ವಸಂತಚಂದನ"ವನ್ನು ಸ್ವರಪ್ರಸ್ತಾರದೊಡನೆ "ಪ್ರಬುದ್ಧ ಕರ್ಣಾಟಕ" ದಲ್ಲಿ ಪ್ರಕಟಿಸಿದ ಸಂಪಾದಕ ಮಂಡಲಿಗೂ, ಅದನ್ನು ತಮ್ಮ ಪ್ರಕಾಶನಮಂದಿರದ ಪ್ರಥಮ ಪುಸ್ತಕವನ್ನಾಗಿ ಆರಿಸಿಕೊಂಡು, ಶ್ರೀ ವೆಸ್ಲಿ ಪ್ರೆಸ್ಸಿನವರ ಸ್ತುತ್ಯ ಸಹಕಾರ

ದೊಡನೆ ಇಷ್ಟು ಅಂದವಾಗಿ ಪ್ರಕಾಶನಗೊಳಿಸಿದ ಹೇಮಾವತೀ ಪ್ರಕಾಶನ ಮಂದಿರ ದವರಿಗೂ ನಾನು ಋಣಿ.

ಈ ಹಾಡುಗಳಿಗೆ ಸ್ವರಪ್ರಸ್ತಾರ ಹಾಕಿ ತಾಳಗಳನ್ನು ಪರಿಷ್ಕರಿಸಿಕೊಟ್ಟವರು ಪ್ರಸಿದ್ಧ ಪಿಟೀಲು ವಿದ್ವಾಂಸರಾದ ಶ್ರೀ ಎ. ವಿ. ಕೃಷ್ಣಮಾಚಾರ್ಯರು; ಇದರ ಕರಡಚ್ಚನ್ನು ಶ್ರಮವಹಿಸಿ ತಿದ್ದಿಕೊಟ್ಟವರು ಗೋಟುವಾದ್ಯದಲ್ಲೂ ಮತ್ತು ಗ್ಯುಟಾರ್ ವಾದ್ಯದಲ್ಲೂ ಪ್ರವೀಣರಾದ ಶ್ರೀಮಾನ್ ವರಾಹಸ್ವಾಮಿಗಳವರು. (ಈ ಪ್ರಸ್ತಾರ ಗಳು ಅಚ್ಚಾಗುವುದಕ್ಕೆ ಮುಂಚೆ ಕೊನೆಯ ರೂಪದಲ್ಲಿ ಅವರ ಸಮೀಕ್ಷಣಕ್ಕೆ ಮರಳಿ ಸಿಕ್ಕಿಲ್ಲದಿರುವುದರಿಂದ, ಇವುಗಳಲ್ಲಿ ಕಂಡುಬರಬಹುದಾದ ಕುಂದುಕೊರತೆ ಗಳಿಗೆ ನಾನು ಹೊಣೆಯೇ ಹೊರತು ಈ ವಿದ್ವಾಂಸರಲ್ಲ.) ಈ ಮಿತ್ರರ ನೆರವೂ ಆಕಾಶವಾಣಿಯ ಅಧಿಕಾರಿಗಳ ಹಾಗೂ ಕಲಾವಿದರ ಸಹಕಾರ ಸಹಾನುಭೂತಿಗಳೂ ಇಲ್ಲದಿದ್ದರೆ ಈ ರೂಪಕದ ಸಂಗೀತವನ್ನು ಪ್ರಕಟಿಸುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಈ ಉಪಕಾರಕ್ಕಾಗಿ ಇವರೆಲ್ಲರನ್ನೂ ಮತ್ತೊಮ್ಮೆ ವಂದಿಸುತ್ತೇನೆ.

ಪು. ತಿ. ನ.

# ವಸಂತ ಚಂದನ

## ನೃತ್ಯೋತ್ಸವರೂಪಕ

### ಸೂತ್ರಧಾರ

(ರಾಗ—ಪೂರ್ವಿಕಲ್ಯಾಣಿ)

ನವವಧೂಪ್ರಣಯದೊಳಗಡಗಿರುವ ಭಾವಿಷ್ಯಭವಲಹರಿಯಿಂದ
ಕಳೆದಂತೆ ತೋರುತಿಹ ನಲವೇಳಲೆಳಸುವುದು ಕವಿಯ ಕನಸಿಂದ
ಬೇಸಗೆಯ ಸೆಕೆ ತಾಗಿ ಸಂಜೆತಂಪಿನ ಕಮ್ಮೆಲರು ಬನದೊಳೀಸೆ
ನಾಡೊಲವನಾಂತಾವಗಾಗದೀ ಸಮಯವನು ಕೊಂಡಾಡುವಾಸೆ ?

ಭಾರತದ ಯಾವ ಪ್ರಜೆ ತಾನೆ ಇಂಥ ಸಂಜೆಯ ತಂಪಿಗಾಗಿ ಅಂಥ ಹಗಲಿನ ತಾಪವನ್ನೂ, ಆ ತಾಪಕ್ಕಾಗಿ ಈ ತಂಪನ್ನೂ ಬಯಸನು ? ದೇವರೇ ಎಚ್ಚತ್ತು ಉತ್ಸವಗೊಳ್ಳುವ ಇಂಥ ಋತುಸಮಯವನ್ನು ಕೊಂಡಾಡುವುದು ನಾಡಿನ ಹೃದಯದಲ್ಲಿ ಯಾವಾಗಲೂ ಪ್ರಸ್ಫುರಿಸುತ್ತಿರುವ ಹರುಷವನ್ನೇ ಕೊಂಡಾಡುವಂತಲ್ಲವೆ ? (ವಾದ್ಯವೃಂದ ಬಸಂತರಾಗವನ್ನು ಬಾರಿಸುತ್ತದೆ, ಕೋಮಲಕಂಠ ಕೇಳಿಬರುತ್ತದೆ) ಇಗೋ ಈ ಗಾನ ನನ್ನಭೀಷ್ಟವನ್ನೇ ಸೂಚಿಸುತ್ತಿರುವಂತಿದೆಯಲ್ಲ. ಈ ಸಮಾನಹೃದಯೆ ಯಾರಿರಬಹುದು ? ಚಿರಪರಿಚಿತವಾದರೂ ನವೋಲ್ಲಾಸದಿಂದ ಕೂಡಿ ಅಪರಿಚಿತವೆಂಬಂತಿರುವ ಈ ಕೊರಲು ಯಾವದು ?

### ನಟಿ

[1]ಬಂದಿತಿದಿಗೋ ಬೇಸಿಗೆ
ಸಂದ ಸಮಯದ ಕೊರಗ ಕಳೆಯುತ

---

(ಬಸಂತ್ ರಾಗದ ಒಂದು ಬಗೆ—ಮಿಶ್ರನಡೆ)

1 ,ನೀಸ ನಿದಪಾ | ಮ್ಮಾಪಗಾ
ಬಂದಿತಿದಿಗೋ ಬೇಸಿಗೆ
,ಮಮ್ಮ ಮಮ ಮಮ | ಮಮಮ ಮಮಮ್ಮಗ
ಸಂದ ಸಮಯದ | ಕೊರಗ ಕಳೆಯುತ

ಮಂದಿಯೆಲ್ಲರ ಲೇಸಿಗೆ

ಹರಸುತಿರೆ ಮುಂಜಾನೆಯೊಳು ಚಳಿ
ಬಿಸಿಲಿನೇರುವೆ ಜೈಸಿಗೆ
ಮುನಿಮನದ ಮೊನೆಮುರಿವ ಮಲ್ಲಿಗೆ-
ನನೆಯ ಕಂಪಿನ ಸೂಸಿಗೆ
ಬಂದಿತಿದಿಗೋ ಬೇಸಿಗೆ

ಮಾರ ತೇರೇರೆಂಬ ಮಾವಿನ
ಕೆಂದಳಿರ ಕೈಬೀಸಿಗೆ
ಆಸೆಯೆಚ್ಚರೆ ಸಲ್ಲರಗಲಿದ
ನಲ್ಲೆಯರ ಬಲುಗಾಸಿಗೆ
ಬಂದಿತಿದಿಗೋ ಬೇಸಿಗೆ.

ಮಳಲ ನಡುವಣ ನೀರಿದಾಗಲು
ಸಂಜೆವೆಳಗಿನ ಹಾಸಿಗೆ
ತುಂಬುಚಂದ್ರನ ಜೊನ್ನದೊಲವೊಳು
ತಾರೆಯಿರುಳಿನ ದೇಸಿಗೆ
ಬಂದಿತಿದಿಗೋ ಬೇಸಿಗೆ.

---

,ದನಿರಿಸ ದಾ ಪಪ| ಮ್ಮಾ$_2$ಪಗಾ೦೦
ಮಂದಿ ಯೆ ಲ್ಲರ| ಲೇಸಿಗೆ
,ಸಸಾಸ ಮಮಮಾ| ಮಾಮಮ್ಮ$_2$ಮ್ಮ$_2$ ಮ್ಮ$_2$ಗ
ಹರಸುತಿರೆ ಮುಂ| ಜಾನೆಯೊಳು ಚಳಿ
ದನಿರಿಸ ದಾ ಪ ಪ| ಮ್ಮಾ$_2$ಪಗಾ೦೦
ಬಿಸಿಲಿನೇರುವೆ| ಜೈಸಿಗೆ
ಸ ಸ ಗ ಗ ಗಸ ಗ| ಮ ಗ ಸ ಸಾಸಸ
ಮುನಿಮನದ ಮೊನೆ ಮುರಿವ ಮಲ್ಲಿಗೆ
ದನಿರಿಸ ದಾ ಪಪ| ಮ್ಮಾ$_2$ಪಗಾ೦೦ || ,ನೀಸನಿದಪಾ ಮ್ಮಾ$_2$ಪಗಾ೦೦
ನನೆಯ ಕಂ ಪಿನ ಸೂಸಿಗೆ ಬಂದಿತಿದಿಗೋ ಬೇಸಿಗೆ

(ಮಿಕ್ಕ ಚರಣಗಳು ಹೀಗೆಯೇ)

ಸಂದ ಸಮಯದ ಬೇಸರನು ಕಳೆ-
ದೆಲ್ಲ ಮಂದಿಯ ಲೇಸಿಗೆ
ಬಂದಿತಿದಿಗೋ ಬೇಸಿಗೆ.

### ಸೂತ್ರಧಾರ

" ಮಳಲಸಡುವಣ ಹೊನಲಿದಾಗಲು
ಸಂಜೆವೆಳಗಿನ ಹಾಸಿಗೆ "

ಆಹಾ, ಎಚ್ಚತ್ತಿದ್ದರೂ ಸುಪ್ತವಾಗಿರುವಂತೆ, ರಂಜಿಸುತ್ತಿದ್ದರೂ ನಿರ್ಲಿಪ್ತವಾದಂತೆ, ಜಗತ್ತನ್ನೇ ಬೆಳಗುತ್ತಿದ್ದರೂ ವಿಶ್ರಾಂತವೂ ಶಾಂತವೂ ಆದಂತೆ ಈ ಹೊನಲುದ್ದಕ್ಕೂ ಹಾಯಾಗಿ ಮಲಗಿರುವ ಸಂಜೆವೆಳಗನ್ನು ನನ್ನ ಸ್ವಾಂತವೆಂದು ಅನುಕರಿಸುವುದೋ.

(ಕೋಗಿಲೆ ಕೂಗುತ್ತದೆ: ಚಿಕುಹೂ ಚಿಕುಹೂ ಕುವ್ವೂ)

ಕೂಗು, ಕೋಗಿಲೆ, ಕೂಗು; ಪ್ರಣಯಿನಿಯ ದಂತಕ್ಷತದಂತೆ ನಿನ್ನ ಕೂಗು ನನ್ನ ಸಮಾಧಾನವನ್ನು ತೀಕ್ಷ್ಣಸುಖದಿಂದ ಸೋಯಿಸಲಿ. ಕೂಗು, ಕೋಗಿಲೆ, ಕೂಗು.

(ಕುಹೂ ಕುಹೂ ಚಿಕುವ್ವೂ)

ಹೃದಯದ ಸೆಲೆಯನ್ನು ಚುಚ್ಚಿ ಮುದದ ಚಿಲುಮೆಯನ್ನು ಚಿಮ್ಮಿಸುವ ಈ ಪರಭೃತ-ದುಲಿವಿನಲ್ಲಿ ಎಂಥ ದೈನ್ಯ ತುಂಬಿದೆ! ಯಾರಲ್ಲಿ ಏನರಕೆ ಎಂಬುದಕ್ಕೆ ಈ ಕೂಗು? ಯಾವ ಮರುಹೃದಯದಲ್ಲಿ ಯಾವ ಮಾಧುರ್ಯದ ಎಚ್ಚರಕ್ಕೆ ?

### ನಟಿ

(ಕೋಗಿಲೆಯ ಕೂಗನ್ನು ಅನುಕರಿಸುತ್ತಾ ಚಿಕುಹೂ, ಕುಹೂ, ಚಿಕುವ್ವೂ ಎನ್ನುತ್ತಾಳೆ)

### ಸೂತ್ರಧಾರ

ಇದೇನು, ಪ್ರಿಯೆ, ಈ ಧ್ವನಿ ನಿನ್ನದೊ ಕೋಗಿಲೆಯದೊ ?

### ನಟಿ

ಯಾವ ಕೋಗಿಲೆ ಕೂಗಿದರೆ ತಾನೆ ನನ್ನರಕೆ ನಿಮಗಾದೀತು? ಅದಿರಲಿ ಇಂದಿನುತ್ಸವದ ಎಚ್ಚರಿಕೆಯಾದರೂ ನಿಮಗಿರಬೇಡವೆ?

(ದೂರದಲ್ಲಿ—" ವಸಂತಚಂದನ " ಎಂಬ ಹಾಡಿನ ಪಲ್ಲವಿ ಕೇಳಿಬರುತ್ತದೆ)

ಅಗೋ, ಉತ್ಸವ ಹೊರಟು ಮೂಲೆ ತಿರುಗಿದೆ. ಕೇರಿ ಕೇರಿ ತಿರುಗಿ ಜನರಲ್ಲಿ ಉತ್ಸಾಹ ಹುಟ್ಟಿಸಿ ನೆರವಿಯನ್ನು ನೆರೆಯಿಸಬೇಕೆಂಬ ನಿಯೋಗದಿಂದ ಹೊರಟ ನಿಮ್ಮನ್ನೇ ನಾನು ಹುಡುಕಿಕೊಂಡು ಬರುವಂತಾಯಿತಲ್ಲ.

### ಸೂತ್ರಧಾರ

ಅಹುದಹುದು, ಸಖಿ, ಸದ್ಯೋಲಬ್ಧಮುದಕ್ಕೆ ಮಿಕ್ಕೆಲ್ಲವನ್ನೂ ಮರೆವ ಸ್ವಭಾವ ನನ್ನದೆಂಬುದನ್ನು ನೀನರಿಯೆಯಾ ? ಇಗೊ, ಇಲ್ಲಿ ನೆರೆದಿರುವ ತರುಣ ತರುಣಿಯರನ್ನೇ ಸಂಬೋಧಿಸಿ ನಮ್ಮ ಕಾರ್ಯಾರಂಭವನ್ನು ಮಾಡೋಣ (ಕೋಗಿಲೆ—' ಕುಹೂ ಕುಹೂ ' ಎನ್ನುತ್ತದೆ) ಆಲಿಸಿರಿ ಕೆಳೆಯರೇ, ಆಲಿಸಿರಿ ಕೆಳದಿಯರೇ, ಚಂದನೋತ್ಸವಾಹ್ವಾನ ಮಂಗಳತೂರ್ಯವನ್ನು !

[2]ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ
ಬನಕೆ ಬನ್ನಿರೆಂದೀಗಲೆ
ಬಣ್ಣಗೊಂಡಿರುವುದೀ ಮಲೆ
ಸಮಯ ಬಿನದಕಿದು ಲೇಸಲೆ.
ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ.

ಬಳಿಯಿಡುತಿದೆ ಮಧುಚಂದನ
ತಿರೆಯೊಳು ಸಂದನಗಂಧನ

---

(ರಾಗ—ಯಮನ್ ಛಾಯೆಯ ಕಲ್ಯಾಣಿ—ಚತುರಶ್ರನಡೆ)

[2] ಗಮ, ಗಮ, ಗರಿಗ ಸಸ ಗಸೀರಿಗಾೀ
ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ
ಗಸಗ ಪಾಪಪಾ,ಮ್ಮಾಪ ಗಾೀ
ಬನಕೆ ಬನ್ನಿರೆಂ ದೀ ಗಲೆ
ಗಸಗ ಪಾಪಪಪ ದಾನಿದ ಪಾೀ
ಬಣ್ಣಗೊಂಡಿರುವು ದೀಮ—ಲೆ
ನಿಸನಿದನಿದಪಪ ಮ್ಮಾಪಗಾೀ
ಸಮಯಬಿನದಕಿದು ಲೇಸಲೆ.
ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ

ಸೊಗದಿ ನೆನೆದು ತಾಸಂದಿನ
ಹನಿಸುತೆ ನನಸೊಳಗಿಂದಿನ
ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ.

(ಕುಹೂ ಕುಹೂ)

ಕೆಳೆಯರೇ, ವಸಂತಚಂದನೋತ್ಸವದ ನಾಂದಿಯಂತಿರುವ ಈ ಕೋಗಿಲೆಯನ್ನು ಲಾಲಿಸಿದಿರಾ ?

ತರುಣತರುಣಿಯರು

ವಸಂತಚಂದನೋತ್ಸವ ! ಹಾಗಂದರೇನು ? ಅದಾವ ಉತ್ಸವ ?

ಸೂತ್ರಧಾರ

ಈ ತೊರೆ, ಈ ಮಲೆ, ಈ ನಾಡು, ಈ ಗುಡಿ, ಈ ಜನ, ಈ ಸಂಜೆ ತಂಪು, ಈ ಬನದ ಕಂಪು, ಜವ್ವನದ ಪೆಂಪು, ನಮ್ಮೆಲ್ಲರ ಹಿಗ್ಗಿನ ಸೊಂಪನ್ನು ಈ ಋತುಧರ್ಮವನ್ನನು ಸರಿಸಿ ಹಾಡಿ ಕುಣಿದು ನಮ್ಮ ಪ್ರಾಣಪ್ರೇರಣಶಕ್ತಿಗರ್ಪಿಸುವ ಉತ್ಸವ ಈ ಚಂದ ನೋತ್ಸವ. ಒಬ್ಬಿಬ್ಬರಲ್ಲಿ ಸಮುದ್ಭೂತವಾದ ಸಂಮೋದ ಸಕಲರನ್ನೂ ವ್ಯಾಪಿಸುವ ಪರಿಯನ್ನು ಸೂಚಿಸುವಂತೆ, ಉತ್ಸವ ಹೊರಟಿರುವ ಹರಿಚಂದನದ ಕಂಪು ಇಲ್ಲಿಗೂ ಹರಡಿ ನಮ್ಮಿರವನ್ನು ತೇಜಗೊಳಿಸುತ್ತಿದೆ. (ಕುಹೂ ಕುಹೂ) ಈ ಕೋಗಿಲೆಯ ಕೂಗು ಈ ಚಂದನದ ನರುಗಂಪನ್ನೇ ಕಿವಿಗೆ ಅನುವದಿಸುವಂತಿದೆ.

ತರುಣತರುಣಿಯರು

(ಆಘ್ರಾಣಿಸಿ)—ಆಹಾ, ಕಂಡರಿಯದ ಕಂಪು ; ಅಹುದಹುದು ಇದಕ್ಕೆ ತಕ್ಕಂತೆ ಅಗೋ ಕೋಗಿಲೆ :

ವೃಂದಗಾನ—

ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ
ಬನಕೆ ಬನ್ನಿ ರಂದೀಗಲೆ
ಬಣ್ಣಗೊಂಡಿರುವುದೀ ಮಲೆ
ಸಮಯ ಬಿನದಕಿದೆ ಲೇಸಲೆ—ಅಕ್ಕೊ ಅಕ್ಕೊ

ಬಳಿಯಿಡುತಿದೆ ಹರಿಚಂದನ
ತಿರೆಯೊಳು ನಂದನಗಂಧನ
ಸೊಗದಿ ಸೆನೆದು ತಾಸಂದಿನ
ಹನಿಸುತ ನನಸೊಳಗಿಂದಿನ—ಅಕ್ಕೊ ಅಕ್ಕೊ

[3]ಹೊನ್ನೆ ಜಾಲಿ ತನಿಗಂಧಕೆ
ಸುರಹೊನ್ನೆ ಜಾಲಿ ತನಿಗಂಧಕೆ
ಸಂಜೆ ಹೊನ್ನ ಮುಗಿಲಂದಕೆ
ಚಂದನೋತ್ಸವಾನಂದಕೆ
ಇಂದಾಗಲೆಮ್ಮ ಹೊಂದಿಕೆ—ಅಕ್ಕೊ ಅಕ್ಕೊ

ತರುಣಿಯರು

[4]ಮಾಧವೋತ್ಸವಾಂಕ ಮಲ್ಲಿಕಾ

ತರುಣರು

ಸ್ಫುರನ್ಮನೋವಿಲಾಸ ಝುಲ್ಲಕಾ

---

[3] ಗಮುಗರಿಗರಿ ಸಸ ನಿರಿನಿರಿಗಾ
ಹೊನ್ನೆ ಜಾಲಿ ತನಿ ಗ-ಂ-ಧ ಕೆ
ಮ್ಮ$_2$ಮ್ಮ$_2$ಮ್ಮ$_2$ದಮ್ಮ$_2$ಗಾಗ ರಿರಿ ನಿರಿನಿರಿಗಾಃ
ಸುರ ಹೊ-ನ್ನೆ ಜಾಲಿತನಿ ಗಂ-ಧ-ಕೆ
ಮ್ಮ$_2$ಮ್ಮ$_2$ ಪಾಪ ಪಪ ಮಾಃ $_2$ಪಗಾಃ
ಸಂಜೆ ಹೊನ್ನ ಮುಗಿ ಲಂ ದಕೆ
ಗಸಗ ಪಾಪ ಪಾ ದಾಃ ನಿ ಪಾಃ
ಚಂ-ದನೋತ್ಸವಾ ನಂ ದ ಕೆ
ನೀದನಿಸನಿದಾ ಪಾಪ ಮ್ಮಾ$_2$ಃ ಪ ಗಾಃ
ಇಂ ದಾ-ಗ ಲೆಮ್ಮ ಹೊಂ-ದಿಕೆ—

[4] ತರುಣಿಯರು—ಮ್ಮಾ$_2$ಪಗಾ ಮರೀಗ ನೀರಿಸಾ,, ನಿ
ಮಾಧವೋತ್ಸವಾಂಕ ಮಲ್ಲಿಕಾ ಸ್ಫು-
ತರುಣರು—ರೀರಿಗಾ ಗಮ್ಮಾ$_2$ಗ ಮ್ಮಾ$_2$ | ದಪಾಮ್ಮ$_2$ಗಾ,
ರನ್ಮನೋವಿಲಾಸ ಝುಲ್ಲಕಾ

ತರುಣಿಯರು

ಹಾಸಿರಿ ಗೆಳೆಯರೆ

ತರುಣರು

ಮುದ ನಡೆದು ಬರೆ

ತರುಣಿಯರು

ಹಾಡಿನ ನಡೆಮುಡಿ ದಾರಿಗೆ

ತರುಣರು

ವಸಂತ ನಗರದ ಕೇರಿಗೆ

ವೃಂದ

ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ
ಬನಕೆ ಬನ್ನಿರೆಂದೀಗಲೆ
ಬಣ್ಣಗೊಂಡಿರುವುದೀ ಮಲೆ
ಸಮಯ ಬಿನದಕಿದು ಲೇಸೆಲೆ
ಅಕ್ಕೊ ಅಕ್ಕೊ ಕುಕಿಲುತಿದೆ ಕೋಗಿಲೆ.

("ವಸಂತಚಂದನ" ಹಾಡು ಕೇಳಿಬರುತ್ತದೆ)

ಸೂತ್ರಧಾರ

ಸಖರೇ, ಸಖಿಯರೇ, ನಮ್ಮೀ ವಸಂತೋಲ್ಲಾಸ ಸಮಯದಲ್ಲಿ ಮೂಲ ಉತ್ಸವವನ್ನೇ ಮರೆತೆವಲ್ಲ. ಸಂಜೆಮುಗಿಲಿನಲ್ಲಿ ತೋರುವ ತಾರಗೆಯಂತೆ ಚಂದ

---

ತರುಣಿಯರು—ನೀ ನಿರಿ ನಿದಪಪ
ಹಾಸಿರಿ ಗೆಳೆಯರೆ

ತರುಣರು—ಮ್ಮಪ ಮ್ಮಪ ಮ್ಮಪಗಾ
ಮುದ ನಡೆದು ಬರೆ

ತರುಣಿಯರು—ಮ್ಮಾ ಮ್ಮಮ್ಮ ಮದಪಾ ಮ್ಮಗ ಮಾ್ಮಪಗಾ ನಿ
ಹಾಡಿನ ನಡೆ ಮುಡಿ ದಾರಿಗೆ ವ-

ತರುಣರು—ನಿರಿನಿ ದನಿದಪಾ ಮಾ್ಮಪಗಾ,,
-ಸಂತ ನಗರದ ಕೇ ರಿ ಗೆ

ನೋತ್ಸವದ ಹಾಡು ಕಿವಿಗೆ ಗೋಚರಿಸುತ್ತಿದೆ. ಅದನ್ನು ಸಂಭ್ರಮದಿಂದ ಸ್ವಾಗತಿಸಿ ಉತ್ಸವದಲ್ಲಿ ನೆರೆಯಬೇಕಷ್ಟೆ.

ವೃಂದ

(ಆಗಲಿ ಆಗಲಿ ಎಂಬ ಅಸ್ತುಕಾರದ ಕಲಕಲ)

ಚಂದನವೃಂದ

[5]ವಸಂತ ಚಂದನ
ನಂದನ ಗಂಧವ ನಿಂದಿಸುತಿದ ಆ-
ನಂದದೊಳಂಜಲಿಯೊಳು ಕೊಳುವೆಲರಿಸ—
ವಸಂತ ಚಂದನ . . .

ವ್ಯಕ್ತಿ

ಅಲರಲರಿನ ಪರಿಮಳಗಳ ಮೇಳದಿ
ಮನಮನಗಳ ಹೊಗುತಲ್ಲಿ ಸುಮಾನದಿ

---

[5] (ಕಾಪಿನಾರಾಯಣೀರಾಗದ ಉತ್ತರ ಹಿಂದೂಸ್ತಾನೀರೂಪ—ಚತುರಶ್ರ ನಡೆ)

ಸರೀ ಮಾ ಮಪಮಪಾ॰॰॰॰॰
ವಸಂತ ಚಂ-ದನ . . .
ಪಾದರಿ ಸಾಸರಿ ನೀ ದನಿ ದನಿ ಪಾ
ನಂದನ ಗಂಧವ ನಿಂದಿಸು ತಿದ-ಆ-
ದಾದಧ ಮಪಪಪ ಮಪಮಗ ರಿಮಗರಿಸಸ
ನಂದದೊಳಂಜಲಿಯೊಳುಕೊಳು ವೆಲರಿಸ—
ಸರೀ ಮಾ ಮಪಮಪಾ॰ ;,
ವಸಂತ ಚಂದನ . . .

ವ್ಯಕ್ತಿ—ದನಿದನಿದನಿದನಿ ಪದ ಮಮ ಮಪ ಪಪ
ಅಲರಲ ರಿನ ಪರಿಮಳಗಳ ಮೇ-ಳದಿ
ಪದ ದಸಸರಿ ನಿನಿ ದಾದ ಮಪಾಪಪ
ಮನಮನಗಳ ಹೊಗು ತಲ್ಲಿ ಸುಮಾನದಿ

ದಿನದ ದಿನದ ಜಂಜಡದೊಳು ಮೈಗರೆ-
ದಿಹ ಸಮ್ಮುದಗಳನೆಚ್ಚರಗೊಳಿಸುವ
ವಸಂತ ಚಂದನ—

ವೃಂದ

ವಸಂತಚಂದನ
ನಂದನಗಂಧವ ನಿಂದಿಸುತಿದ
ಆನಂದದೊಳಂಜಲಿಯೊಳು ಕೊಳುವೆಲರಿನ—

ವ್ಯಕ್ತಿ

ಬಂಡೆಗಳೆದೆಬಿರಿಸುತ ಬೆಳೆದೊತ್ತಿನ
ಹುತ್ತದ ನಾಗಗಳಪ್ಪುಗೆ ಕೆಳೆಯೊಳು
ಕಮ್ಮನೆಮರ ಮೈಗೊಂಡಿಹ ರಸದಿಂ-
ದೊಲುಮೆಸಂಜ ಬಗೆಗೇರಿಸ ಕಲಿತಿಹ

ವೃಂದ

ವಸಂತಚಂದನ—
ನಂದನ ಗಂಧವನಿಂದಿಸುತಿದ ಆ-
ನಂದದೊಳಂಜಲಿಯೊಳು ಕೊಳುವೆಲರಿನ.

---

ಸಗಗ ಸಗಗ ಗಪಗ ಸಸ ಸನಿದ ನಿಸ
ದಿನದ ದಿನದ ಜಂಜ ಡದೊಳುವ್ಮೈಗರೆ
ಸಸ ನಿಸರಿಸ ನಿನಿನಿನಿ ದಾದದ ಮಗರಿಸ
ದಿಹ ಸ=====ಮ್ಮುದಗಳ ನೆಚ್ಚರ ಗೊಳಿಸುವ
ಸರೀ ಮಾ ಮಪಮಪಾ ,;;
ವಸಂ ತ ಚಂ-ದನ—

(ಮಿಕ್ಕ ಚರಣಗಳು ಹೀಗೆಯೇ)

ವ್ಯಕ್ತಿ

ಮಲೆತಲೆಮಂಜೊಳು ಪಳಗಿಹ ಕರ್ಪೂ-
ರದ ಮೃಗಮದದುನ್ಮದ ಸುರಭಿಯ ಕಾ-
ಶ್ಮೀರದ ಕಂದರಲಕ್ಷ್ಮಿಯ ಕುಂಕುಮ-
ವೋ ಎನಲಚ್ಚರಿ ಕೇಸರಿ ಚರ್ಚೆಯ

ವೃಂದ

ವಸಂತಚಂದನ . . . ಸಂದನ . . . ವೆಲರಿನ-

ಸೂತ್ರಧಾರ ಮತ್ತು ನಟಿ

ತನ್ನಿರಿ ಚಂದನ
ಸಂದನಗಂಧವ ನಿಂದಿಸುತಿದ ಆ-
ಸಂದದೊಳಂಜಲಿಯೊಳು ಕೊಳುವೆಲರಿನ.

ಸೂತ್ರಧಾರ

ತೆರೆದೆದೆಯನು ಸುಪುಹಾರವು ಮುತ್ತಿಡೆ
ಬಾಂದೊರೆಯಂತೆಲರಂಗವನಪ್ಪಿಡೆ
ಉದಿತೋದಿತರಾಗವ ಲೇಖಿಸುವೊಲು
ಚಂದನಕಾಗಲಿ ವಕ್ಷಸ್ಥಲವೆಡೆ
ತನ್ನಿರಿ ಚಂದನ—

ಹೊನಲೆಡೆಯ ವೃಂದ

ತನ್ನಿರಿ ಚಂದನ
ಮೈಯನು ತಂಪಿಸಿ ಮನದಲಸಿಕೆಯನು
ತರುಬುತ ಹೃದಯವನೆಚ್ಚರಗೊಳಿಸುವ
ವಸಂತಚಂದನ

## ಉತ್ಸವಮುಖ್ಯ

[6]ನೀಲದ ತಂಪ ತರುವ ತೆಂಗಾಳಿ
ಚಂದನಗಂಧಕದರ ವೈಹಾಳಿ
ಕಾತರಿಸುವ ಕೋಗಿಲೆದನಿ ಕೇಳಿ
ಚಿತ್ತಕಿಟ್ಟ ಚಿತ್ತಜನಿದೊ ದಾಳಿ

## ಉತ್ಸವವೃಂದ

ಕೊಳ್ಳಿರಿ ಚಂದನ
ಮೈಯನು ತಂಪಿಸಿ ಮನದಲಸಿಕೆಯನು
ತರುಬುತಲಿರವನು ಹುರುಪುಗೊಳಿಸುವ
ವಸಂತ ಚಂದನ

---

6 (ರಾಗ—ಪಟದೀಪ್—ಗೌರೀ ಮನೋಹರೀ ಹಾಗೆ)

,ನೀ ನಿಸಾ ದಾಪ ಮದಪ ಗಾ ಮಪಪಾ
ನೀಲ ದ ತಂಪ ತರುವ ತೆಂ ಗಾ-ಳಿ
,ಗಾ ಮಪಾ ನೀ ನಿ ನಿಸಸ ಸಗ ರಿಸ ಸಾ
ಚಂ ದನ ಗಂಧ ಕದರ ವೈ -ಹಾ-ಳಿ
,ನೀ ನಿನೀ ನಿ ನಿ ಸಾ ನಿಸ ನಿಸದಾಪಾ
ಕಾ ತರಿ ಸುವ ಕೋಗಿಲೆ ದನಿಕೇಳಿ
,ಮಾ ಪ ಗಾಮ ಗಮಪ ನಿನಿನಿನಿ ಸಸಾ
ಚಿ ತ್ತ ಕಿಟ್ಟ ಚಿ-ತ್ತ ಜನಿದೊ ದಾಳಿ

ಉತ್ಸವವೃಂದ—ಗಮಪನೀ ನಿಸನಿ ಸಾ ,,,
ಕೊ-ಳ್ಳಿರಿ ಚಂ-ದನ
,ನೀ ನಿನೀ ಸಾಸಸ ನಿನೀ ನಿಸಾ ದದಪಪ
ಮೈಯನು ತಂಪಿಸಿ ಮನದಲ ಸಿಕೆಯನು
,ಮಪಾ ದಪಾ ಮಪಗಮ ಗಮಾ ಪನೀ ನಿಸದಪ
ತ ರುಬುತ ಲಿರವನು ಹುರುಪು ಗೊಳಿಸುವ
ಗಮಪಾ ನೀ ನಿಸನಿಸಾ ;,;
ವಸಂ- ತ ಚಂ-ದನ

(ಹಾಡು ಕ್ರಮೇಣ ದೂರ ಸರಿಯುತ್ತದೆ)

ಹೊಸ ವೃಂದ

[7]ಒಲಿಯೆವೊಲಿಯೆವೇ ತರುಣರು ನಾವೀ
ವಸಂತ ಮಾಸಕೆ
ತಮ್ಮದೆಲ್ಲವೀಡಾಡುವ ತರುಗಳ
ಪ್ರಸೂನಹಾಸಕೆ

ತರುಣಿಯರು

ಮಂದಪವನನಾಹ್ವಾನದ ಚಂದನ-
ದುತ್ಸವ ಮೋದಕೆ
ಓಗೊಡದಿಹೆವೇ ಅಡಿತುಡಿಯುತ್ತಿರೆ
ಮೃದಂಗ ನಾದಕೆ.

---

ಉತ್ಸವವೃಂದ—(ರಾಗ—ಕಾಪಿನಾರಾಯಣೀ ಛಾಯೆ)
ಸರೀಮಾಮನೀದಪಾ ,;;
ವಸಂತ ಚಂ-ದನ . . .
(ಹಾಡು ಕ್ರಮೇಣ ದೂರ ಸರಿಯುತ್ತದೆ)

[7] ಹೊಸ ವೃಂದ—(ರಾಗ—ಜಂಜೂಟಿ—ಚತುರಶ್ರನಡೆ)
,ಗಮಾಗ ರಿಗರಿಸಾ ಸಸಸಸ ನಿರಿಸನಿದನಿಪಾ
ಒಲಿಯೆ ವೊಲಿಯೆವೇ ತರುಣರು ನಾವೀ
ಪದಸಸಾ ರಿಪಮಗಾ ;;,
ವಸಂತ ಮಾಸಕೆ
ಗಾಾಮಮಾದ ಪಾ ಮಪಮ ಗ ಗಸರಿಗ
ತಮ್ಮದೆಲ್ಲ ವೀ ಡಾ-ಡು ವ ತರುಗಳ
ದರಿಸಸಾನಿದನಿಪಾದಸರಿಪಮಾಗಾ , , ,
ಪ್ರ – ಸೂ – – ನ – ಹಾಸ ಕೆ

ತರುಣ

[8]ಹೊಳೆವೀ ನೀರಿನ ಮಲೆವೀ ಗಾಳಿಯ
ಬಂದೀ ಮಾಮರದೊಳಗೆ
ಕೂವೀ ಕೋಗಿಲೆಗೋವೋ ಎನ್ನದ-
ರಾರೀ ಬಸಂತದೊಳಗೆ

ತರುಣಿಯರು

[9]ಓ ತಳಿರೇ, ಓ ಮಲರೇ, ಓ ಎಲರೇ, ಕಾನೇ
ರಂಗುಮುಗಿಲ ಬಲು ರಂಜನೆಯೊಳು ತಿರೆ-
ಗಂಗವಿಸುತ್ತಿಹ ಬಾನೇ !

(ವೃಂದ ನೃತ್ಯಗೀತ ಈಗ ಮೊದಲಿಡುತ್ತದೆ)

---

(ರಾಗ—ಪೀಲು)

[8] ,ಪಪಾ ಮದಪಾಮಾ ಗಾಗಗಾ ರೀರಿಗಪಮಾಗಾ ರೀರಿರಿ
ಹೊಳೆ ವೀ — — — ನೀರಿನ ಮಲೆವೀ — — — ಗಾಳಿಯ
,ಸಾೀಸಾೀ ನಿಸನಿದ ಪದಸಸಸಾ ;;
ಬಂದೀ ಮಾ ಮ ರದೊಳಗೆ
,ಗಾೀಗಸಾ ಪಾ ಪಪಾ ಮಪಾನಿಪಾ ಮಗಾಗಗ
ಕೂ ವೀ ಕೋಗಿಲೆ ಗೋ—ವೋ ಎನ್ನದ
,ಸಾೀಸಾೀ ನಿಸನಿದಪದ ಸಸಸಾೀೀೀ
ರಾ ರೀ ಬ — ಸಂ — ತ — ದೊಳಗೆ — — —

[9] ತರುಣಿಯರು—ಪಾಮಪಮಾೀ ಮಾಮಪಗಾೀ ರೀ ರಿಗಸಾೀಗದಪಾ ;;;
ಓ ತಳಿರೇ, ಓ ಮಲರೇ, ಓ ಎಲರೇ, ಕಾನೇ—
ಪಾಪ ಮದಪ ಮಮ ಮಾಮಮಮಪಗಗ
ರಂಗು ಮುಗಿಲ ಬಲು ರಂಜನೆಯೊಳು ತಿರೆ
ಸಾಸ ಸ ನಿಸದದ ಪದಸಾ ;;
ಗಂಗವಿ ಸುತ್ತಿಹ ಬಾ — ನೇ

[10]ಬಳಿಯಿಡೆ ಚಂದನ ಮಲೆಯೆಲರೊಳಗೆ
ಮುಗಿಲಿನ ತಳಿರಿನ ಬಾನಿನ ಕೆಳಗೆ
ನಿಲ್ವರಾರೊಳಗೆ ?
ಹದುಳದ ರೂಢಿಗೆ ಬಿಗಿದಿಹ ಮುದಗಳ
ಮೊಲ್ಲೆ ಕಂಪಿದು ಎಲ್ಲೆ ಗೆಡಿಸಿರೆ
ನಿಲ್ವರಾರೊಳಗೆ ?

ಸಂಜೆಯ ಸಿರಿಯನು ದಳದೊಳು ತಡೆದು
ರಂಗಿನಾಸೆ ತೀರುವವೊಲು ಹಿಡಿದು
ತಾವರೆಯಿದೆ ಮುಗಿದು ;
ಇನಿಯ ಕರೆಯ ಬರೆ ಕಾದಿಹ ವಧುವೊಲು
ಬಿರಿಯಲಿರುವ ನೈದಿಲೆಯೊಳು ಕೆರೆಸಿರಿ
ಪೆರೆ ಬರೆ ಕಾದಿಹುದು.

ಹಕ್ಕಿವಿಂಡಿಗಿದು ಸೂಜಿಯ ಕಲ್ಲು
ಹರಡಿದೆ ಮರಗಳ ಸೆಳೆವೆಲ್ಲೆಲ್ಲು
ಪಡೆ ತೆರಳಿತು ಹಗಲು ;

---

(ಪೀಲು ಮತ್ತು ಷಣ್ಮುಖ ಪ್ರಿಯದ ಸ್ವರಗಳು)
—ಚತುರಶ್ರನಡೆ

[10] ಪಪಪಮ ಗಮಮಗ ಸಗಗಸ ನಿಸಸಾ
ಬಳಿಯಿಡೆ ಚಂ—ದನ ಮಲೆಯೆಲರೊಳಗೆ
ಪಪಪಮ ಗಮಮಗ ಸಗಗಸ ನಿಸಸಾ
ಮುಗಿಲಿನ ತಳಿರಿನ ಬಾ—ನಿನ ಕೆಳಗೆ
ಪಾ ದನೀ ದದ ಪಾ ; ; ;
ನಿ ಲ್ವರಾ ರೊಳಗೆ — — —
ಪದದದ ಸಾಸಸ ನಿರಿಸಸ ನಿನಿದಪ
ಹದುಳದ ರೂಢಿಗೆ ಬಿಗಿದಿಹ ಮುದಗಳ
ಸಾ ನಿದಾಪದ ಪಾ ಮಗರಿಗಸ ನಿರೀ ಸದಾ ಪ ದಸಾ ; ;
ಮೊಲ್ಲೆ ಕಂಪಿದು ಎಲ್ಲೆ ಗೆಡಿಸಿರೆ — ನಿ — ಲ್ವರಾ ರೊಳಗೆ — —
(ಮಿಕ್ಕ ಚರಣಗಳು ಹೀಗೆಯೇ)

ಬಿಡುವು ಬಿಜಗೈಯೆ ಪರಾಕು ಎನುತಿದೆ
ಸುಗಂಧ ಭಾರದ ಸರಾಗದೆಲರಿದು
ವಿರಾಮದೀ ಹೊಗಳು.

ಮದನನ ರಥಕಾದುದು ನೆಲೆಸೇರುವೆ
ಗಿಳಿಗಾದುದು ಗೋಪುರತೆನೆಯೇರುವೆ
ರವಿಗಾಯಿತು ಮರವೆ;
ದಿವ ನೆಲಕೆರಚಿದೆ ಚೆಂಬೆಳಕೋಕುಳಿ
ವಸಂತಸಮಯದ ಅವಭೃಥವೆನೆ ಪರಿ
ಹಿಂದುಳಿವುದು ತರವೇ ?

ಕೈಬಳೆಗಾಗಲಿ ದುಂಡುಮಲ್ಲಿಗೆ
ಸುರಗಿಯ ಮುಗುಳಿನ ಬಂದಿ ಕೊರಳಿಗೆ
ಕುರುಳಿಗೆ ಪಾದರಿ
ಕೇದಗೆ ಕಂಪಿನ ಬವಳಿಯ ಗಾಳಿಗೆ
ಕೈಯ ಗುಲಾಬಿಗಳೆಚ್ಚರ ತರುವೊಲು
ಆಡಲಿ ಈ ಪರಿ.

ಇರವಿರವನು ಹೊಗುವೊಲವಿನ ಗೆಲವೋ
ನೆರೆದು ಬರುವ ನಲಪಿನ ಕಲಕಲವೋ
ನೇವುರದಿನಿದುಲಿವೋ
ಗುಟ್ಟಗುಟ್ಟನೀಡಾಡುವ ಹಾಡಿನ
ಮಟ್ಟೊಳು ಹೃದಯವ ಹೃದಯವ ಮುಟ್ಟುವ
ಮಾಟವೊ ಕಂಪಿದುವೋ ?

ಹಗಲಿನ ಕಳೆ ಹರಳೋಲೆಯ ಸೇರಿರೆ
ಹೆರಳ ಚೊಲ್ಲೆಯದ ಬಿಲ್ಲೆಯ ಸೇರಿರೆ
ಸಂಜೆಯ ಕೊನೆಗೆಂಪು

ಮೆಲುನಗೆಯೊಳು ಮುಂಬರುವ ಜೊನ್ನದ
ಸೂಚನೆಯಿರೆ ಮೈ ಬೆಳಕಿನ ರಂಗವೊ
ಎನೆ ಬಳುಕಿಸುವಿಂಪು.

ಬಳಿಯಿಡೆ ಚಂದನ ಮಲೆಯೆಲರೊಳಗೆ
ಮುಗಿಲಿನ ತಳಿರಿನ ಬಾನಿನ ಕೆಳಗೆ
ನಿಲ್ವರಾರೊಳಗೆ ?

**(ವಾದ್ಯವೃಂದ ಕ್ರಮೇಣ ಮರೆಯಾಗುವುದು)**

### ಸೂತ್ರಧಾರ

ಎಂಥ ವಿಚಿತ್ರ ಮನಸ್ಸು ನನ್ನದು ? ಊರಿಗೆ ಊರೇ ಉತ್ಸವಗೊಂಡಿರುವಾಗ ವಿವಿಕ್ತವಾಗಿರಬೇಕೆನ್ನುತ್ತದೆ ಅದು ; ವಿವಿಕ್ತವಾಗಿರುವಾಗ ಹಬ್ಬದ ಸಂಭ್ರಮದಲ್ಲಿ ಬೆರೆಯುವುದಕ್ಕೆ ಕಾತರಿಸುತ್ತದೆ. ಈ ಉತ್ಸವೋನ್ಮಾದವನ್ನೂ ಇದರ ಚೆಲುವನ್ನೂ ತಡೆಯಲಾರದೆ ನಾನು ಹಿಂದುಳಿಯಬೇಕಾಯಿತು. ಓ ನಾಡೇ, ನಿನ್ನಂತೆ ಬೇರೊಂದು ನೆಲವುಂಟೆ, ನಿನ್ನ ಚಂದನದಂಥ ಕಂಪು ಬೇರುಂಟೆ ? ನಿನಗಲ್ಲದೆ, ನಾನಿನ್ನಾರಿಗೊಲಿಯಲಿ ?

### ನಟಿ

**(ಬರುತ್ತಾ ಕೊನೆಯ ಮಾತನ್ನು ಕೇಳಿ)**—ಅದು ನನಗೆ ಗೊತ್ತಾಗುವುದು ಹೇಗೆ ? ನೀವೊಲಿದಿರುವ ಸಮಯವಾವುದೋ, ಮುಳಿದಿರುವ ಸಮಯವಾವುದೋ ?— ಆವುದಕ್ಕೊಲಿವಿರೋ ಆವುದಕ್ಕೆ ಮುಳಿವಿರೋ ? ನಿಮ್ಮ ಸಹಚರಿಯಾಗಿರುವುದೇ ಒಂದು ತಪಸ್ಸಾಗಿದೆ ನನಗೆ.

### ಸೂತ್ರಧಾರ

ಪ್ರಿಯೆ, ಈಗ ನಾವೆಲ್ಲಿದ್ದೇವೆ ?

### ನಟಿ

ಮುಂದಿನವರಿಗೆ ಹಿಂದಾಗಿ, ಹಿಂದಿನವರಿಗೆ ಮುಂದಾಗಿ.

### ಸೂತ್ರಧಾರ

ಸಖಿ, ಹುಡುಗಾಟಕ್ಕಾದರೂ ಸತ್ಯವನ್ನೇ ಹೇಳಿದೆ. ಅದು ಸರಿ, ಈಗ ನಾವು ಯಾವ ಸ್ಥಳದಲ್ಲಿದ್ದೇವೆ?

### ನಟಿ

ನಗರೋದ್ಯಾನದ ಗುರುತು ಸಿಕ್ಕದಷ್ಟು ಯಾವ ತರದ ಮರವೆಯಿದು? ಇಲ್ಲಲ್ಲವೇ ಉತ್ಸವ ನೆರೆಯುವುದು?

### ಸೂತ್ರಧಾರ

ಹಾಗಾದರೆ ಆ ಬಳ್ಳಿವಾಡದಲ್ಲಿ ಸ್ವಲ್ಪ ಹೊತ್ತು ಕುಳಿತಿರೋಣ ಬಾ.

### ನಟಿ

(ಹುಡುಕುತ್ತಾ)—ತೆರವಿರುವ ಬಳ್ಳಿವಾಡಗಳೇ ಕಾಣವಲ್ಲ—ಬನ್ನಿ ಬನ್ನಿ ಅದು ವಿವಿಕ್ತವಾಗಿರುವಂತಿದೆ.

(ಬಳ್ಳಿವಾಡವೊಂದರಲ್ಲಿ)

### ತರುಣ

[11]ನೀರಜಾಕ್ಷಿ ನೀ ಬಳಿಯಿರೆ ಜಾರಿ ಹೋಹುದೀ ತಿರೆ
ಕೋರಿ ಕೋರಿ ಪಡೆದ ನಾರಿ ದೂರವಿಂತು ಸರಿವರೆ?
ಬರಿದಿರವಿಗೆ ಹೊಸ ಹರಣವ ಹರಿಸುವ ಕೈಸೋಕಿಗೆ
ಕಾತರಿಸುವ ನಿನ್ನಿನಿಯಗೆ ಮುನಿವೆಯೇಕೆ ಈ ಬಗೆ?

---

(ರಾಗ—ರಾಗೇಶ್ರೀ—ರೂಪಕತಾಳ)

11 ,ರೀಗಪಮರೀ ಸಾಸ ನಿರಿಸಸಾನಿ ನಿದಾನಿಸಾ, ನಿದಾನಿಸ ಗಗ ರಿಗಪಮಾ
ನೀ . . . ರ ಜಾಕ್ಷಿ ನೀ . . . ಬಳಿಯಿರೆ ಜಾ-ರಿ ಹೋ-ಹುದೀ-ತಿರೆ
,ಗಾ,ಮಪಾದಾ ನಿಸಾನಿದಪಪ, ರೀಗಪಮರೀ ಸನಿದಾನಿ ರಿಗಾಪ ಮಾ
ಕೋರಿ ಕೋರಿ ಪಡೆದ ನಾ-ರಿ-ದೂ - - ರ ವಿಂ - - ತು ಸರಿವರೆ?
ಬರಿದಿರವಿಗೆ ಹೊಸ ಹರಣವ ಹರಿಸುವ ಕೈಸೋಕಿಗೆ ('' ನೀರಜಾಕ್ಷಿ '' ಎಂಬಂತೆ)
ಗಾಮಪಪದಪದನಿದದಪಪ
ಕಾತರಿಸುವನಿನ್ನಿನಿಯಗೆ| ಮುನಿವೆಯೇಕೆ ಈ ಬಗೆ? ('ದೂರವಿಂತುಸರಿವರೆ' ಎಂಬ ಹಾಗೆ)

ನಟಿ

(ಪಿಸುಮಾತಿನಲ್ಲಿ) ಓಹೋ ನಿಮ್ಮ ಪಾತ್ರವನ್ನು ಯಾರೋ ವಹಿಸಿರುವಂತಿದೆ.

ತರುಣಿ

ಕನಸಿಗೆ ಕನಸಿಂತು ನೆರೆಯೆ ಮನಸು ನಿಲ್ಲದೊಂದೆಡೆ
ಕನಸೆ ನನಸು ಎನಿಸುವನಿತು ನನಸಿಗೆಂದು ಮಾರ್ಪಡೆ?
ನೀರಜಾಕ್ಷಿಯೆಂದು ಕರೆವ ನೀರನಿಲ್ಲೆ ಇರುವನೇ
ಕೋರಿ ಕೋರಿ ಪಡೆವೆನೆಂದು ದೂರ ನಿಲ್ಲುತೆರೆಯನೇ ?

ಸೂತ್ರಧಾರ

(ಪಿಸುಮಾತಿನಲ್ಲಿ) ಇದಾರ ಪಾತ್ರ ?

ನಟಿ

ಪ್ರಣಯಿಗಳ ಏಕಾಂತವನ್ನು ನಾವಾಲಿಸುವುದು ತರವಲ್ಲ, ಬನ್ನಿ ಬನ್ನಿ.

ಸೂತ್ರಧಾರ

ಒಳ್ಳೆ ಎಚ್ಚರಿಕೆ ಕೊಟ್ಟೆ. ಬಾ, ತಾವರೆ ಕೊಳದೆಡೆ ಸ್ವಲ್ಪ ತಂಗೋಣ.

(ಉದ್ಯಾನವನವನ್ನು ಸಮೀಪಿಸುತ್ತಿರುವ ಚಂದನೋತ್ಸವದ ಹಾಡು ಕೇಳಿಬರುತ್ತದೆ)

ಚಂದನವೃಂದ

(ದೂರದಲ್ಲಿ)

[12]ತುಂಬಿದಿಂದು ಬರೆ ಬಾನಿಗೆ ಚಂದನ
ಹೂತ ಬನಕೆ ಹೂಧೂಳಿಯ ಚಂದನ

---

(ರಾಗ—ಮುಖಾರಿ—ಆದಿ)

12 ,ಪಾ೦ಪ ಮಪಮಗರಿ ರಿಮಗರಿ ಸಾಸಸ
ತುಂಬಿ ದಿಂದುಬರೆ ಬಾನಿಗೆ—ಚಂದನ
,ಸಾ೦ಸ ಸಸರಿನಿದ ಸಾರಿಸ ನಿದ ಸಸ
ಹೂತ ಬನಕೆ ಹೂ—ಧೂಳಿಯ ಚಂ—ದನ

ಬಹುಮುಹೋತ್ಸವಾಮೋದಸ್ಯಂದನ
ಹೃದಯೋತ್ಸವಕೀ ವಸಂತಚಂದನ
ಕೊಳ್ಳಿರಿ ಚಂದನ
ನಂದನ ಗಂಧವ . . . ಎಲರಿನ
ವಸಂತ ಚಂದನ

## ಸೂತ್ರಧಾರ

ಪ್ರಿಯೆ, ಈ ಚಂದನಗೀತ ಚಂದ್ರೋದಯವನ್ನು ಸೂಚಿಸುತ್ತಿದೆ. ಅಗೋ ಈ ಹಾಡಿಗೆ ವಿಧೇಯವಾಯಿತೋ ಎಂಬಂತಿದೆಯಲ್ಲ ಪ್ರಾಚೀದಿಶೆ !

## ನಟಿ

(ರಾಗ—ಹಂಸನಾದ)

ಅಹುದಿನಿಯು

ಬಾನಿದಾದುದ್ದೈ ಕೃಷ್ಣಪಾಂಡುರ
ಮೌನವಾಂತುದ್ದೈ ವೃಕ್ಷಮಂದಿರ
ಏನಿದೇನೆಂಬಿ ಮೂಡದೆಸೆಯೊಳು
ತಾನೆಯೆಂಬಂತೆ ಮೂಡುತಿದೆ ಪೆರೆ

---

ಪದಸರಿ | ಗರೀ | ಸದರಿಸ | ನೀದಪ
ಬಹುಮುಹೋ | ತ್ಸವಾ | ಮೋ–ದ | ಸ್ಯಂದನ
ಪದಸಾ ನಿದ ಪಾ ಮಪಾಮ ಗಾರಿಸ
ಹೃದಯೋತ್ಸವಕೀ ವಸಂತ ಚಂದನ
ಸಾಸನಿದ ರಿಮಗ ರೀೀೀೀೀೀೀ
**ಕೊಳ್ಳಿರಿ–ಚಂದನ – –**
ಪಾದರಿ | ಸಾಸರಿ | ಸದರಿಸ | ನಿದಪಾ
ನಂದನ | ಗಂಧವ | ನಿಂ-ದಿಸು | ತಿದ ಆ
ಪದರಿಸ | ರಿನಿಪದ | ರಿಮಪಪ | ಮಗರಿಸ
ನಂ-ದದೊ | ಳಂಜಲಿ | ಯೊಳುಕೊಳು | ವೆಲರಿನ || ಕೊಳ್ಳಿರಿ ಚಂದನ

ಸೂತ್ರಧಾರ

ಪ್ರಿಯಸಖಿ, ನಾವು ನೋಡುತ್ತಿರುವಂತೆಯೇ ಈ ಅರುಣಬಿಂಬವೆಂತು ಶುಭ್ರವಾಗುತ್ತಿದೆ !

(ರಾಗ—ವಾಚಸ್ಪತಿ)

ತಾ ರಾಗಲಿಪ್ತಾತ್ಮನೆಂಬಂತೆ ಕಪಿಶಂ
ನೀರಾಗಮಾರ್ಗಶ್ರಮಿಯೆನ್ನೆ ಹರಿತಂ
ನೇನೀಯಮಾನಂ ಶಮಸಿದ್ಧಿಗೆನಲು
ನೋನೋಡಲಾದಂ ಶಶಿಯೆಂತು ಧವಳಂ !

ಈ ಚಂದ್ರೋದಯವನ್ನು ನೋಡುತ್ತಿರುವಂದು ಸಿದ್ಧಾರ್ಥ ಬುದ್ಧನಾದ ಕನಸು ಕಟ್ಟುತ್ತಿದೆಯಲ್ಲ.

ನಟಿ

ನನಗೆ ಯಶೋಧರೆಯ ಪಾಡೋ ಏನೋ.

ಸೂತ್ರಧಾರ

ಈ ಜಗದಾನಂದವನ್ನು ಒಬ್ಬನೇ ಅನುಭವಿಸುವಷ್ಟು ಆತ್ಮಸಾಮರ್ಥ್ಯವನ್ನು ನಾನು ಪಡೆದು ಬಂದಿಲ್ಲ, ಕಲ್ಯಾಣಿ.

ನಟಿ

ತಿಳಿಮನಸ್ಸಿನಲ್ಲಿರುವಾಗ ನಿಮ್ಮನ್ನು ಕಂಡು ನನಗಾಗುವ ಸಂತೋಷವನ್ನು ಈ ಚಂದ್ರೋದಯ ಮರುಕೊಳಿಸುತ್ತಿದೆ.

[18]ಬಾನ ಬಣ್ಣದ ಮಾಗಿಸಿ ಶಶಿ
ಮೂಡುತಿಹನಿಗೋ

---

(ಜಂಜೂಟಿ—ರೂಪಕ)

[18] ,ದಾ೹ನಿ ಸಾ೹ಸರೀ ಮಗಾಸರಿನಿಸ
ಬಾನ ಬಣ್ಣವ ಮಾಗಿಸಿ ಶಶಿ
,ಸಾ,೹ನಿ ದನಿಪದನೀ ಸಾ ; ;
ಮೂಡು ತಿ—ಹ—ನಿ ಗೋ

ಸಂಜೆ ಹೂವ ಚೆಲ್ಲಿ ಸಾರೆ
ನಮ್ರವಾಗಿ ತಾರೆ ತೋರೆ
ಸರಸದಿರುಳ ಕರವ ಪಿಡಿದು
ತೋರುತಿಹನಿಗೋ—

ಸೂತ್ರಧಾರ

ಪ್ರಿಯೆ, ಬಳ್ಳಿವಾಡಗಳನ್ನುಳಿದು ಕಾದಲಕಾದಲೆಯರು ನಿನ್ನ ಸವಿಗೊರಲಿ ನಿಂಪಿಗೆ ನಿನ್ನ ಸುತ್ತ ನೆರೆದರಿಗೋ.

ನಟಿ

ಬಾನ ಬಣ್ಣವ ಮಾಗಿಸಿ ಶಶಿ
ಮೂಡುತಿಹನಿಗೋ

ವೃಂದ

ಬಾನ ಬಣ್ಣವ ಮಾಗಿಸಿ ಶಶಿ
ಮೂಡುತಿಹನಿಗೋ

---

,ಸಾ೯ಸ ಗಾಗ | ಮಗಮ ಪಾಪ ||
ಸಂಜೆ ಹೂವ ಚೆಲ್ಲಿ ಸಾರೆ
,ದಾ೯ದ ದನಿದ | ಪದಮ ಪಾಪ ||
ನಮ್ರ ವಾಗಿ ತಾ-ರೆ ತೋರೆ
'ದದಾದ ದನಿಪ | ಪಮಗ ರಿಗಸ ||
ಸರಸ ದಿರುಳ ಕರವ ಪಿಡಿದು
'ಸಗಾರಿ ಸದನಿ ಸರಿಸರಿಗಾಪಮಮಾ,ಗ–ರಿಸನಿನೀದ
ತೋರುತಿ ಹನಿ-ಗೋ—

'ದಾನಿ ಸಾ೯ಸರೀ ಮ/ಗಾ ಸರಿ ನಿಸ
ಬಾನ ಬಣ್ಣವ ಮಾಗಿಸಿ ಶಶಿ
ಸಾ,ನಿ ದ ನಿ ಪಸನೀ | ಸಾ , ,
ಮೂಡು ತಿ=ಹ=ನಿ ಗೋ

(ಮಿಕ್ಕ ಚರಣಗಳು ಹೀಗೆಯೇ)

ನಟಿ

ಉದ್ಯಾನದ ಪುಷ್ಪಬೃಂದ
ಲಜ್ಜೆಯ ಸಿರಿ ಹೊಂದಿದಂದ
ತೆಳುಬೆಳಕಿನ ಮೇಲುದುವನು
ತಳೆಯುವಂತಿಗೋ—

ವೃಂದ

ತಳೆಯುವಂತಿಗೋ
ಬಾನ ಬಣ್ಣವ ಮಾಗಿಸಿ ಶಶಿ
ಮೂಡುತಿಹನಿಗೋ.

ನಟಿ

ತಮವಸುಳಿದವೆಸುವ ತೆರದಿ
ನಿಡಿದು ನೆಳಲ ಬಿಸುಟು ನೆಲದಿ
ತರುಗಳೆದ್ದು ಬೇರೆ ತರವ
ತೋರುವಂತಿಗೋ

ವೃಂದ

ತೋರುವಂತಿಗೋ
ಬಾನ ಬಣ್ಣವ ಮಾಗಿಸಿ ಶಶಿ
ಮೂಡುತಿಹನಿಗೋ—

ನಟಿ

ನೆಳಲು ಬೆಳಕಿನೆಂಥ ಆಟ
ಶ್ಯಾಮಗೋಪಿಯರ ಕೂಟ
ಎಲ್ಲೋ ಎಂದೋ ಎನಿಸುವಂಥ
ಚಂದವಾಯ್ತಿಗೋ—

ಸೂತ್ರಧಾರ

ಎಲ್ಲೋ ಎಂದೋ ಎನಿಸುವಂಥ
ಮಾಟವಾಯ್ತಿಗೋ
ಬಾನ ಬಣ್ಣವ ಮಾಗಿಸಿ ಶಶಿ ಏರುತಿಹನಿಗೋ

(ದೂರದಲ್ಲಿ ಹಳ್ಳಿಯವರು ಕೋಲಾಟವಾಡುತ್ತಾ ಬರುತ್ತಾರೆ. "ಬಾರಣ್ಣಾ ಬೆಳುದಿಂಗಳೇ ನಮ್ಮ ಜತೆ ಸೇರಣ್ಣಾ ಬೆಳುದಿಂಗಳೇ" ಎಂದು.)

ಸೂತ್ರಧಾರ

ಈ ಬೆಳುದಿಂಗಳಿನ ಚಂದಸೋತ್ಸವಕ್ಕೆ ನೆರೆಯ ಹಳ್ಳಿಯವರೂ ಬಂದು ಸೇರು ವಂತಿದೆ. ಈಗೀಗ ಉತ್ಸವಕ್ಕೆ ತುಂಬುಕಳೆ.

ಹಳ್ಳಿಗರು

[14]ಬಾರಣ್ಣಾ ಬೆಳುದಿಂಗಳೇ
ಬಂದು ಸೇರಣ್ಣಾ ಬೆಳುದಿಂಗಳೇ
ತಿಂಗಳೇ ತಿಂಗಳೇ ಬೆಳು ಬೆಳುದಿಂಗಳೇ
ಬಾರಣ್ಣಾ ಬೆಳುದಿಂಗಳೇ
ನಮ್ಮ ಜತೆ ಸೇರಣ್ಣಾ ಬೆಳುದಿಂಗಳೇ

ಮುಖ್ಯ

ಸೂರ್ಯನ ತೆರ ಮುಳುಗಿ—ಚಂದ್ರನ ತೆರ ಎದ್ದು
ಕ್ಷೀರದ ಕಡಲಿನ ಸಾರವನೆತ್ತುತ
ತಾರಣ್ಣಾ ಬೆಳುದಿಂಗಳೇ

ಪುನ್ನಾಗರಾವಳಿ—ಆದಿ

14 ಹಳ್ಳಿಗರು—ಗಾಽಗಾ,ರೀ ಸಸ ರಿಸ ನೀಽಽಽಽ
ಬಾರಣ್ಣಾ ಬೆಳುದಿಂಗಳೇ
ಸರಿ ಗಾಽಗಾರಿ ಸಸ ರಿನಿಸಾಽಽಽಽಽ
ಬಂದು ಸೇರಣ್ಣಾ ಬೆಳುದಿಂಗಳೇ
ಪಪ ಪದಪಾ ಮಮ ಮಪಮಾ ಗಗಗಮಗಾ ರಿಸರಿನಿ
ತಿಂಗಳೇ — — ತಿಂಗಳೇ — — ಬೆಳು ಬೆ-ಳು ದಿಂಗಳೇ

ವೃಂದ

ಬಾರಣ್ಣ ಬೆಳುದಿಂಗಳೇ—ತಂದು ತೋರಣ್ಣ ಬೆಳುದಿಂಗಳೇ
ತಿಂಗಳೇ ತಿಂಗಳೇ ಬೆಳುಬೆಳುದಿಂಗಳೇ
ಬಾರಣ್ಣ ಬೆಳುದಿಂಗಳೇ—ನಮ್ಮ ಜತೆ
ಸೇರಣ್ಣ ಬೆಳುದಿಂಗಳೇ

ಮುಖ್ಯ

ಆಧಾರವಿಲ್ಲದೆ ಮೇಲಿನ ಬಯಲೊಳು
ಬೀಳದೆ ತೇಲುತ ಓಲಾಡೆ ತಾರಗೆ
ಮೇಲಾಡುವಂಥ ತಿಂಗಳೇ
ಕೋಲಾಡು ಬೆಳುದಿಂಗಳೇ

ವೃಂದ

ತಿಂಗಳೇ ತಿಂಗಳೇ ಬೆಳುಬೆಳುದಿಂಗಳೇ
ಮೇಲಾಡುವಂಥ ತಿಂಗಳೇ
ಕೋಲಾಡು ಬೆಳುದಿಂಗಳೇ

ಮುಖ್ಯ

ಕೋಲೇ ಕೋಲಣ್ಣ ಕೋಲೆ
ಬಾಲೆಯರಾಟಕೆ ಬಾರಣ್ಣ ಬೆಳುದಿಂಗಳೇ
ನೀ ಜತೆ ಕೋರಣ್ಣ ಬೆಳುದಿಂಗಳೇ

ವೃಂದ

ತಿಂಗಳೇ ತಿಂಗಳೇ ಬೆಳುಬೆಳುದಿಂಗಳೇ
ಬಾರಣ್ಣ ಬೆಳುದಿಂಗಳೇ
ನೀ ಜತೆ ಕೋರಣ್ಣ ಬೆಳುದಿಂಗಳೇ

## ಸೂತ್ರಧಾರ

ಹಿಂದೆ ಮುಂದೆ ನೋಡಿ—ಎಂದೋ ಎಂದೋ ಎಂಬ
ಎಂದೆಂದಿನಾ ಸೊಗವಿಂದೇಯೆ ಕೋ ಎಂದು
ತಂದಿಲ್ಲಿ ಸುರಿವಂಥ ತಂದೆ ತಿಂಗಳೇ
ಬಾರಣ್ಣಾ ಬೆಳುದಿಂಗಳೇ
ತಂದು ತೋರಣ್ಣಾ ಬೆಳುದಿಂಗಳೇ—

## ವೃಂದ

(ಪಿಸುಮಾತಿನಲ್ಲಿ) (ನಮ್ಮ ಜೊತೆಗೆ ಸ್ವಾಮಿಯವರೂ ಸೇರಿಕೊಂಡು ಬಿಟ್ಟರು)

ಬಾರಣ್ಣಾ ಬೆಳುದಿಂಗಳೇ—ತಂದು ತೋರಣ್ಣಾ ಬೆಳುದಿಂಗಳೇ
ತಿಂಗಳೇ ತಿಂಗಳೇ ಬೆಳುಬೆಳುದಿಂಗಳೇ
ಬಾರಣ್ಣಾ ಬೆಳುದಿಂಗಳೇ ನಮ್ಮ ಜತೆ ಸೇರಣ್ಣಾ ಬೆಳುದಿಂಗಳೇ

(ಈಗ ವಸಂತಚಂದನದ ಹಾಡು ಸಮೀಪಿಸಿ ಇದರೊಡನೆ ಬೆರೆಯುತ್ತದೆ)

## ಚಂದನವೃಂದ

[15]ಒಲಿವರೆ ನಮ್ಮೀ ವಸಂತಸಮಯಕೆ
ಸಿಂಗರಸಡಗರದೀ ಮಲೆ ಹಳುವಿಗೆ
ಬೆಳುದಿಂಗಳ ಗುಡಿಗೋಪುರದೂರಿಗೆ

---

(ಶುಭಪಂತುವರಾಳಿ—ಆದಿ)

15 ,ಪಪಾಪಪಾ ಪದಪಮ ಗಾ ರಿಗ ರೀಸ ಸರಿಗಗ
ಒಲಿವರೆ ನ—ಮ್ಮೀ ವ- ಸಂತ ಸಮಯಕೆ
,ದಾಽದದಾ ದದದದ ನಿನಿದದ ಪಪ ದದಪಮ ಗಗ
ಸಿಂಗರ ಸಡಗರ ದೀ— ಮಲೆ ಹ—ಳು—ವಿಗೆ
,ಗಗಾಗಗಾ ಗಗಗಗ ರಿಗಮಗ ರಿಸಸಸ
ಬೆಳುದಿಂ— ಗಳಗುಡಿ ಗೋ—ಪುರ ದೂ—ರಿಗೆ

ಒಲಿವರೆ ರಸಸ್ವಾಯತ್ತಕೆ ಕೊಳ್ಳಿರಿ
ವಸಂತ ಚಂದನ

ಶ್ರುತಿಘೋಷದ ಶ್ರುತಿಮೋಹನಗೀತದ
ಸಂಶ್ರಿತ ಧರ್ಮಾಗಮಸೌಂದರ್ಯದ
ಹಸೆಯೊಸಗೆಯ ಚೆಲುವಿನ ಸಂರಂಭದ
ನೆನಪೊಳು ತೊಯ್ದಿಹ ಸುವರ್ಣವರ್ಣದ
ವಸಂತಚಂದನ

ಋತು ನಡೆಗೊಳಿಸುವ ಮಾಧವಲಾಸ್ಯವ
ಮನ ಅನುವದಿಸುವ ತೆರ ಅನುಗೊಳಿಸುವ
ಪರಿಣಾಮಕೆ ಪರಿಮಳಿಸಿಹ ಪರಿಣತ
ಸೌಗಂಧದ ಪರಿಕರ್ಮವ ಸೇಹದಿ
ಕೊಳ್ಳಿರಿ ಚಂದನ

ನಂದನಗಂಧವನಿಂದಿಸುತಿದ ಆ-
ನಂದದೊಳಂಜಲಿಯೊಳು ಕೊಳುವೆಲರಿನ
ವಸಂತಚಂದನ.

(ವೃಂದ ಮುಂದುವರಿಯುತ್ತದೆ)

ಽಸಸಾಸಸಾ | ಸಸ ನೀರಿನಿ | ನಿದದಪ | ದದಪಮ ಗಗ |
ಒಲಿವರೆ | ರಸ ಸ್ವಾ - - | ಯ-ತ್ತ ಕೆ | ಕೊ - - ಳ್ಳಿರಿ |
ರಿಗರಿಽಽಸ | ಽರಿಗರಿ | ಗಾಽಽ | ಽಽಽಽ |
ವ-ಸಂ-ತ | - ಚಂದ | ನ | |

ಪಾದರಿ | ಸಾಸರಿ | ಸಾರಿನಿದದ | ಪಪಗಾ |
ನಂದನ | ಗಂದವ | ನಿಂ - - ದಿಸು | ತಿದ ಆ |
ದಾದದ | ಪಾಪಪ | ಮದಮಗ | ರಿಗರಿಸ |
ನಂದದೊ | ಳಂಜಲಿ | ಯೊಳುಕೊಳು | ವೆಲರಿನ |
ವಸಂತ ಚಂದನ

(ಮಿಕ್ಕ ಚರಣಗಳು ಹೀಗೆಯೇ)

### ಸೂತ್ರಧಾರ

ನಾನು ಕಾಣಬೇಕೆಂದಿದ್ದ ಕನಸನ್ನು ಕಂಡಂತಾಯಿತು. ಡಿಂಭಕುಂಭ ಕೂರ್ಚಗಳನ್ನು ಉಳಿದು ದೇವರು ಈ ಸೆರಪಿಯ ಉಲ್ಲಾಸದಲ್ಲೇ ಮೂರ್ತಿವತ್ತಾಗಿದ್ದಾನೆಂದು ಯಾವ ಭಾವುಕನಿಗೆ ತೋರದು! ಹಾಡಿನಲ್ಲಿ ಡೋಲಾಯಮಾನನಾಗಿ ಚಂದನದ ಕಂಪಿನ ಸ್ಫೂರ್ತಿಯಲ್ಲಿ ತೇಜಗೊಳ್ಳುತ್ತಾ ಬೆಳುದಿಂಗಳಿನಲ್ಲಿ ತನ್ನ ಮಂದಸ್ಮಿತವನ್ನು ಹರಡುತ್ತಿರುವ ಸಕಲಾಂತರ್ಯಾಮಿಯನ್ನು ಕಂಡು ನಲಿಯುವುದು ಇಂತಲ್ಲದೆ ಇನ್ನೆಂತು? (ವಾದ್ಯಸೂಚನೆ ಮುಂದಿನ ವೃಂದಗೀತಕ್ಕೆ) ಈ ಒಸಗೆ ಹಾಡಿನಲ್ಲಿ ಈ ಉತ್ಸವ ತನ್ನ ಉಚ್ಛ್ರಾಯವನ್ನೇ ಕಾಣುತ್ತಿದೆ. ಪ್ರೇಯಸಿ, ಬಾ, ಇನ್ನು ನಾವು ಇದರಲ್ಲಿ ಕರಗಿಹೋಗೋಣ.

### ಮಹಾವೃಂದ

[16]ಮಧುವನದೊಳು ಮುದ ಹರಿಸುವ
ಮಧುಮಾಧವ
ಮಧುರೋತ್ಸವ
ಹರಿಚಂದನ ದೊಸಗೆ
ಹೃದಯತಲದ ಸೊದೆಯೆತ್ತುವ ಮಧುಮಥನನಿಗೊಸಗೆ

---

ಖರಹರಪ್ರಿಯ—ರೂಪಕ.

16 ಮಹಾವೃಂದ—ಪಪಸಸಸಸ ಪಪಮಮಗರಿ
ಮಧುವನದೊಳು—ಮುದ ಹರಿಸುವ
ಪಪ ಮಾಗರಿ
ಮಧುಮಾಧವ
ಪಪ ಮಾಗರಿ |
ಮಧುರೋತ್ಸವ
ಸರಿಗಮಗರಿ | ಸಸಸಾ॰॰ |
ಹರಿಚಂದನ ದೊಸಗೆ
ಪದನಿಸನಿದ | ಪದನಿಸನಿದ | ದನಿದದಪಮ | ಪದಪಾ॰॰ |
ಹೃದಯತಲದ | ಸೊದೆಯೆತ್ತುವ | ಮಧುಮಥನನಿ | ಗೊಸಗೆ

ಸಿರಿ ನಿಂತಿರೆ ಹಸೆಗೆ
ಶಿವ ಶಿವೆಯರ ಜೊತೆಗೆ

ಮಧುವನದೊಳು ಮುದ ಹರಿಸುವ ಮಧುಮಾಧವ ಮಧುರೋತ್ಸವ
ಹರಿಚಂದನದೊಸಗೆ.

ವ್ಯಕ್ತಿ

ಅಂದಿನವರೊ ಇಂದಿನವರೊ ಎಂದಿನವರೊ ಎಂಬ
ಎಂದೆಂದುಮಿಂತೆಯೆ ಎಂಬ
ನಲವಿರೆ ಬಗೆತುಂಬ

ವೃಂದ

ಮಧುವನದೊಳು ಮುದವಗರೆವ ಮಧುಮಾಧವ ಮಧುರೋತ್ಸವ
ಹರಿಚಂದನದೊಸಗೆ

ವ್ಯಕ್ತಿ

ಹಕ್ಕಿ ಹೊಳಲ ಸದ್ದಡಗಲು ಮಿಕ್ಕ ಸೃಷ್ಟಿ ಮೌನ
ಮಡುಗೊಳೆ ಸುಮ್ಮಾನ
ಬಗೆಯೊಳೆಸೆಯೆ ಗಾನ

ಬಂದ ಬನದಿ ಮಧುಮಾಧವ ಮಧುರಭಾವದುದಯೋತ್ಸವ
ಹರಿಚಂದನದೊಸಗೆ.

ವೃಂದ

ಬಂದಬನದಿ ಮಧುಮಾಧವ ಮಧುರಭಾವದುದಯೋತ್ಸವ
ಹರಿಚಂದನದೊಸಗೆ.

---

ದಸ ನಿದಪಮ | ಮದಪಾೞ |
ಸಿರಿ ನಿ—ಂತಿರೆ ಹಸೆಗೆ
ದಸ ನಿದಪಮ | ಮದಪಾೞ |
ಶಿವ ಶಿವೆಯರ ಜೊತೆಗೆ
(ಮಿಕ್ಕ ಚರಣಗಳು ಹೀಗೆಯೇ)

ವ್ಯಕ್ತಿ ೧

ಬಾನ ಮುಸುಕನೋರೆಮಾಡಿ ಮೀನಾಕ್ಷಿಯು ತೋರೆ

ವ್ಯಕ್ತಿ ೨

ಸೋಮಾಕ್ಷನು ಸಾರೆ

ವ್ಯಕ್ತಿ ೩

ತಿರೆಹಸೆಗಿದೊ ಜಾರೆ

ವೃಂದ

ಕೈಯ ಕೈಯ ಹಿಡಿದಾಪ್ತರ
ಮುದದೀಪ್ತರ
ಭವಸುಪ್ತರ
ಹರಿಚಂದನದೊಸಗೆ—

| ತರುಣ | ತರುಣಿ |
|---|---|
| ನಾ ರಾಘವ | ನಾ ಜಾನಕಿ |
| ಅಜ ನಾ | ಇಂದುಮತೀ |
| ನಳ ನಾ | ದಮಯಂತೀ |

ವಾದ್ಯ—ಪಪಸಸಸಸ | ಪಪಮಾಗರಿ | ಪಪಮಾಗರಿ |
ಸರಿಗಮಗರಿ | ಸಸಸಾ ;
ವಾದ್ಯ—ದಸನಿದಪಮ | ಮದಪಾ ;
(ಎಂಬುದಾಗಿ ಮಧ್ಯೆ ಮಧ್ಯೆ ವೃಂದವಿರಾಮದಲ್ಲಿ ವಾದ್ಯ ನುಡಿಯುತ್ತಿರುತ್ತದೆ)
ವಾದ್ಯ—ಪದನಿಸ ನಿದ | ಮದಪಾ ;
ವಾದ್ಯ—ಪಪಸಸಸಸ | ಪಪಮಾಗರಿ | ಪಪಮಾಗರಿ |
ಪಪಮಾಗರಿ | ಸರಿಗಮಗರಿ | ಸಸಸಾೞ |
ಪದನಿಸ ನಿದ | ಪದನಿಸನಿದ | ಪದಮಾ ಪಾ | ಪದಪಾ ,
ನಾರಾಘವ | ನಾಜಾನಕಿ | ಅಜನಾ ಇಂ | ದುಮತೀ
ನಳನಾ ದ | ಮಯಂತೀ

ವೃಂದ

ಹಬ್ಬೆವದಂತಿ—

ವ್ಯಕ್ತಿದ್ವಂದ್ವ

ಇರವೊಳಿಂತು ಒಲವಾಳ್ದರ
ಸಲವಳಿದರ ಮಧುರಾಕ್ಷರರೋರಗೆ ನಮ್ಮೊಸಗೆ.

ವೃಂದ

ಇರವೊಳಿಂತು ಒಲವಾಳ್ದರ
ಸಲವಳಿದರ ಮಧುರಾಕ್ಷರರೋರಗೆ ನಮ್ಮೊಸಗೆ.

ವ್ಯಕ್ತಿ ೧

ಸುಮಗಳ ನರುಗಂಪೊಳು ತರು ತೇಲುತ್ತಿರುವಂದ
ಕಾಲನ ಗೆಲುವಂದ
ಲಗುಬಗೆಯಿಂದ

ವ್ಯಕ್ತಿ ೨

ಮಧುವನದೊಳು ಮುದದೇರುವೆಯೀ ಸೇರುವೆ-
ಯೊಳು ಜೋಲಿವೆ ಬದುಬದುಕುಗಳೊಸಗೆ.

ವೃಂದ

ಮಧುವನದೊಳು ಮುದದೇರುವೆಯೀ ಸೇರುವೆ-
ಯೊಳು ಜೋಲಿವೆ ಬದುಬದುಕುಗಳೊಸಗೆ.

೧ ವೃಂದಾರ್ಧ—ಹರಣದ ಸೆಲೆಯೆಲ್ಲ ಕೈತುದಿಗಿಳಿಯೆ
೨ ವೃಂದಾರ್ಧ—ಎದೆತಳದೊಲವೆಲ್ಲ ಹಾಡೊಳು ನೆರೆಯೆ
೧ ವೃಂದಾರ್ಧ—ಕೈಯ ಬೀಸೆ
೨ ವೃಂದಾರ್ಧ—ನುಡಿಯನೆಸೆಯೆ

ವೃಂದ—ನಮ್ಮಿಚ್ಛೆಗೆ ಬರುವ
ಸುಮ್ಮಾನವ ಹಿಡಿವ

ಪೂರ್ಣವೃಂದ

ಮಧುವನದೊಳು ಮುದನೆರಿಯುವ
ಮಧುಮಾಧವ ಹೃದಯೋತ್ಸವ
ಹರಿಚಂದನದೊಸಗೆ.

(ಹಾಡು ಮೆಲ್ಲಮೆಲ್ಲನೆ ದೂರ ಸರಿಯುತ್ತದೆ)

ಸೂತ್ರಧಾರ

ಆಹ, ಇಂಥ ಗೆಲವೂ ಇಂಥ ನಲವೂ ಕೊನೆಗೊಳ್ಳಲೇಬೇಕು !

ರಾಗ—ಕೇದಾರ

ಬೆಳುದಿಂಗಳಾಹ್ಲಾದ ಜನಜನಕೆ ಹಬ್ಬಿ
ಹರಿಚಂದನಾಮೋದ ಉಸಿರುಸಿರ ತಬ್ಬಿ
ಹದುಗಿದ್ದ ಸುಮ್ಮಾನದೊಸಗೆಯೊಳು ಹರಿವ
ಮಧುರೋತ್ಸವೋನ್ಮಾದ ತೋರುತಿಹುದಿಳಿವ.

ಈ ಬೆರಗಿನ ಜಗತ್ತಿನ ಸಮಸ್ತವೂ ಅಚಿರ, ಸ್ವಪ್ನಮಯ. ಕ್ಷಣಮಾತ್ರದಲ್ಲಿ ಮರೆಯಾಗುವಳಲ್ಲವೇ ಈ ಸಂಮೋದವಾಹಿನೀ ಕ್ಷಣದೆ !

(ದೂರದಲ್ಲಿ ಯಾರೋ)

[17]ಮೇಲಿನ ಮೇಲೆ ತೇಲುವಿಂಥ ಕಾಲಬಾರದೇ
ಕಾಲ ಬಾರದೇ ಇಂಥ ಕಾಲ ಬಾರದೇ
ಮೇಲಿನ ಮೇಲೆ ತೇಲುವಿಂಥ ಕಾಲ ಬಾರದೇ

---

(ರಾಗ—ಹಳ್ಳಿಯ ಹಾಡಿನ ಜತಿ—ಮೋಹನ ರಾಗ ಛಾಯೆ—ರೂಪಕ)

[17] ದದ ಸಸಾ ರಿ ಗಾ ಮಗ ರಿರಿ, ರೀ ಗಾಮುಗ ರಿಗರೀ ಸಸಾ,,
ಮೇಲಿನಮೇಲೆ ತೇಲು-ವಿಂ-ಥ-ಕಾ—ಲಬಾ-ರದೇ
ದದದಾದ ಪದಪದಾಗ ಗಾಮುಗ ಗರಿರಿ, ರಿ ಗಾಮುಗ ಗರೀಸ ಸಸಾ
ಕಾಲ ಬಾರ ದೇ - - - ಇಂ - - ಥ - - - ಕಾಲ ಬಾ - - ರದೇ
ಮೇಲಿನ ಮೇಲೆ ತೇಲುವಿಂಥ ಕಾಲ ಬಾರದೇ

ಬಣ್ಣಬಣ್ಣದಲರು ಬೆಳಕ ತನ್ನೊಳೆ ರಮಿಸೆಂದು ತಡೆವ
ಬನ ಕಂಪಿನ ಲಘಿಮೆಭೂತಿಯೊಳು ಕಾಲನ ಗೆಲ್ಲುತಿರುವ
ಹರುಷ ತುಳುಕುವೆಳನಗೆಯೊಳು ಜೀವಜೀವವಾಡುವಿಂಥ
ಕಾಲಬಾರದೇ
ಮೇಲಿನ ಮೇಲೆ ತೇಲುವಿಂಥ ಕಾಲ ಬಾರದೇ

ವೃಂದ

ಮೇಲಿನ ಮೇಲೆ ತೇಲಿಸುವಿಂಥ ಕಾಲಬಾರದೇ

ವ್ಯಕ್ತಿ

ಹಗಲೆಚ್ಚರದಿರುಳಮರೆವಿನಚ್ಚರಿಯೀ ಬೆಳುದಿಂಗಳ
ತಡಿಯಣ ನೇವರದುಲಿವಿಗೆ ಕೊಳವರಳಿಸೆ ಹೂಕಂಗಳ
ಹಾಲ್ಗಡಲಿನ ಕುವರಿಯರೆನೆ ಲೋಲಬಾಲೆಯರಾಡುವಿಂಥ
ಕಾಲಬಾರದೇ

ವೃಂದ

ಕಾಲ ಬಾರದೇ ಇಂಥ ಕಾಲ ಬಾರದೇ
ಮೇಲಿನ ಮೇಲೆ ತೇಲಿಸುವಿಂಥ ಕಾಲ ಬಾರದೇ

---

'ಗಗಗಾಗ ಗಾಪಗ ರಿರಿ, ರಿರಿ ರಿ ರಿ, ರಿ ಸರಿಮ್ಗ ಸಸಸ
ಬಣ್ಣ ಬಣ್ಣ ದಲರು ಬೆಳಕ ತನ್ನೊಳೆರಮಿಸೆಂದು ತಡೆವ
ದದಸಾಸಸ ಸರಿಗರೀ ರಿ,ರಿ ರಿರಿ ರಿರೀ, ರಿ ಸರಿಮ್ಗ ಸಸಸ
ಬನಕಂಪಿನ ಲಘಿಮೆ ಭೂತಿಯೊಳು ಕಾಲನ ಗೆಲ್ಲುತಿರುವ
ದದದದದದ ಪದಸದಪಪಾ ಪಪದಪ ದಪಗಗ ಪಗ ರಿರಿ ರಿರಿ,ರೀ
ಹರುಷ ತುಳುಕುವೆಳನಗೆಯೊಳು ಜೀವ ಜೀವ–ವಾ–ಡು ವಿಂ–ಥ
ಗಾಮಗ ಗರೀಸ ಸಸಾ
ಕಾ–ಲ– ಬಾ–ರದೇ–

(ಮಿಕ್ಕ ಚರಣಗಳು ಹೀಗೆಯೇ)

ವ್ಯಕ್ತಿ

ಹೆರಳೊಳೊಡೆವ ಮಲ್ಲಿಗೆ ಮುಗುಳೆರೆಯೆ ತರಳ ಮನಕೆ ಮರುಳ
ದಿವದ ನೀಲಿಮೆಯನಾರಿಸಿ ತರು ನೆಲಕ್ಕೆ ಚೆಲ್ಲೆಯರಳ
ತಾರೆಯ ತುಡಿವೆಳಗಿನಂತೆ ಮನದೊಳೊಲುಮೆ ಮಿಡಿಯುವಿಂಥ
ಕಾಲಬಾರದೇ

ವೃಂದ

ಕಾಲಬಾರದೇ ಇಂಥ ಕಾಲಬಾರದೇ
ಮೇಲಿನ ಮೇಲೆ ತೇಲಿಸುವಿಂಥ ಕಾಲಬಾರದೇ

ವ್ಯಕ್ತಿ

ಮುದ್ದು ಕಾಂಬುದೆಂದು ಮುಗುದೆ ಕೆನ್ನೆಯೊರಸಿ ತಣಿಯದಿರುವ
ಹೆಗಲಿನತ್ತಣಿಂದ ಪ್ರಮದೆ ಕೋರೆನೋಟದಲಗನೆಸೆವ
ಒಲಿದವರೊಬ್ಬರೊಬ್ಬರಿಗೆ ಹೊಣೆಯನೆಲ್ಲವೊಪ್ಪಿಸುವಿಂಥ
ಕಾಲಬಾರದೇ.

ವೃಂದ

ಮೇಲಿನ ಮೇಲೆ ತೇಲಿಸುವಿಂಥ ಕಾಲಬಾರದೇ
ಕಾಲಬಾರದೇ ಇಂಥ ಕಾಲಬಾರದೇ

ವ್ಯಕ್ತಿ

ಮೆಟ್ಟುಂಗಾಲನಿಟ್ಟೆಟುಕಿಸೆ ಹವಣಿಸುತಿರೆ ನೀತಿರೀತಿ
ಮುಟ್ಟಿಮುಟ್ಟದಂತೆ ಮೇಲೆ ಹಗುರಡಿಯೊಳು ಕುಣಿಯೆ ಪ್ರೀತಿ
ತಿರೆಯ ಪ್ರೀತಿ ದಿವದ ರೀತಿಯಾಯಿತೆಂದೆ ಎನಿಸುವಿಂಥ
ಕಾಲಬಾರದೇ

ವೃಂದ

ಮೇಲಿನ ಮೇಲೆ ತೇಲಿಸುವಿಂಥ ಕಾಲಬಾರದೇ

ವ್ಯಕ್ತಿ

ಕುಂಕುಮ ಚಂದನ ಗಂಧ ಮಂದ ಮಾಧವ ಸಖ ಗಂಧವಾಹ
ಹಾಡೊಳಲೆವ ಹೃದಯಹೃದಯಮಾಧುರ್ಯವ ಸೊಯ್ವನಾಹ
ಇನ್ನದಾವ ದೇಹ ಗೇಹವಿಂಥ ಮುದಕೆ ಎನಿಸುವಿಂಥ
ಕಾಲಬಾರದೇ.

ವೃಂದ

ಮೇಲಿನ ಮೇಲೆ ತೇಲಲಿಂಥ ಕಾಲಬಾರದೇ—

ವ್ಯಕ್ತಿ

ಇರವಿರವಿನ ಮುದ್ರೆಯೊಡೆವ ಸ್ವರದ ಸ್ವರದ ಲಹರಿಯೊಳಗೆ
ಮೂಡಿಬಂದು ಮಧುಸೂದನ ಸರ್ವರ ಸುಖದೊಳಗೆ ತೊಳಗೆ
ಜೀವದರಕೆ ಹಾರೈಸುವ ತುಂಬು ಸಲವಿನೊಸಗೆಯಿಂಥ
ಕಾಲಬಾರದೇ—

ವೃಂದ

ಮೇಲಿನ ಮೇಲೆ ತೇಲಲಿಂಥ ಕಾಲಬಾರದೇ

ವ್ಯಕ್ತಿ

ಕಾಲಬಾರದೇ ಇಂಥ ಕಾಲಬಾರದೇ
ಮೇಲಿನ ಮೇಲೆ ತೇಲಲಿಂಥ ಕಾಲಬಾರದೇ

ವೃಂದ

(ಮೆಲ್ಲಗೆ ಕಿವಿಗೆ ಮರೆಯಾಗುವ ಹಾಗೆ ಗೀತ ಏರುತ್ತದೆ)

ಕಾಲಬಾರದೇ ಇಂಥ ಕಾಲಬಾರದೇ
ಮೇಲಿನ ಮೇಲೆ ತೇಲಿಸುವಿಂಥ ಕಾಲಬಾರದೇ

ಸೂತ್ರಧಾರ

ಪ್ರಿಯರೇ, ಹಾಡಿನ ಬಾವುಟವನ್ನಾಡಿಸುತ್ತಾ, ಆಡಿಸುತ್ತಾ ದೂರದೂರ ಸರಿಯಿತು ಮಾಧವನ ತೇರು. ವಸಂತಚಂದನೋತ್ಸವ ಮುಗಿಯಿತು. ಇನ್ನು—

(ರಾಗ—ಮಧ್ಯಮಾವತಿ)

ಕವಿಯ ಕನಸು ಕವಿಗಿರಲಿ
ಅದರ ನನಸು ನಮಗಿರಲಿ
ಇಂಥ ಕನಸು ನನಸುಗಳ
ನೆನವಿನಿನಿಸು ನಿಮಗಿರಲಿ
ಈ ಉತ್ಸವದೆಲ್ಲರಿಗೂ ಮಧುಸೂದನ ಸೊಗತರಲಿ.

ವೆಸ್ಲಿ ಪ್ರೆಸ್, ಮೈಸೂರು.

# ಶ್ರೀ ಗೊರೂರು ರಾಮಸ್ವಾಮಯ್ಯಂಗಾರ್ಯರ ಕೃತಿಗಳು

## ಕಥೆ, ಕಾದಂಬರಿ ಮತ್ತು ಚಿತ್ರಗಳು

ಹಳ್ಳಿಯ ಚಿತ್ರಗಳು
ಬೈಲಹಳ್ಳಿ ಸರ್ವೆ
ವೈಯ್ಯಾರಿ
ಶಿವರಾತ್ರಿ
ಪುರಾತನ ಕಥೆಗಳು
ಉಸಬು
ಪುನರ್ಜನ್ಮ
ಊರ್ವಶಿ
ಕೊನಷ್ಟೈಲ ಕಥೆಗಳು
ನಮ್ಮ ಊರಿನ ರಸಿಕರು
ಗರುಡಗಂಬದ ದಾಸಯ್ಯ
ಬೆಸ್ತರ ಕರಿಯ
ಮೆರವಣಿಗೆ
ಹೇಮಾವತಿ
ಹಳ್ಳಿಯ ಬಾಳು
ಮಲೆನಾಡವರು
ಕ್ರೌಂಚ ವಧ
ಭಗವಾನ್ ಕೌಟಿಲ್ಯ
ಕಮ್ಮಾರ ವೀರಭದ್ರಾಚಾರಿ

## ಪದ್ಯ

ಹಳ್ಳಿಯ ಹಾಡುಗಳು

## ಜೀವನ, ಚರಿತ್ರೆ

ಅಬ್ದುಲ್ ಕಲಾಂ ಅಜಾದ್
ಭಾರತ ಭಾಗ್ಯ ವಿಧಾತ
ಗಾಂಧಿಯವರ ದಕ್ಷಿಣ ಯಾತ್ರೆ
ಸತಿ ಕಸ್ತೂರಿ ಬಾ
ಮಹದೇವ ದೇಸಾಯಿ ಕೃತಿಗಳು

## ಸಾಹಿತ್ಯ ವಿಮರ್ಶೆ

ಸಾಹಿತ್ಯದ ಜೇವಾಳ
ಸಾಹಿತ್ಯಾನುಭವ
ಸಾಹಿತ್ಯ ರಶ್ಮಿ

## ಇತರ ಕೃತಿಗಳು

ಸರ್ವಜ್ಞನು ತೋರಿಸಿದ ದಾರಿ
ಪೂರ್ಣ ಸ್ವದೇಶಿ
ಮಕ್ಕಳ ಪೋಷಣೆ
ವಿಮೋಚನೆ (ಮದ್ಯಪಾನ ನಿರೋಧ)
ಭಕ್ತಿಯೋಗ
ತಾಯ್ನುಡಿಯಲ್ಲಿ ಶಿಕ್ಷಣ
ಸ್ವಾತಂತ್ರ್ಯವೇ ಧರ್ಮ

---

**ಹೇಮಾವತೀ ಪ್ರಕಾಶನ ಮಂದಿರ, ಗೊರೂರು**

# ಪು.ತಿ.ನ. ಅವರ ಇತರ ಕೃತಿಗಳು

## ಕವನಸಂಗ್ರಹಗಳು :

ಹಣತೆ
ಮಾಂದಳಿರು
ಶಾರದಯಾಮಿನಿ
ಗಣೇಶದರ್ಶನ
ರಸಸರಸ್ವತಿ
ಮಲೆದೇಗುಲ

## ನಾಟಕಗಳು :

ಅಹಲ್ಯೆ
ದೋಣಿಯ ಬಿನದ ಮತ್ತು ಕವಿ
ಗೋಕುಲ ನಿರ್ಗಮನ
ಶಬರಿ
ವಿಕಟಕವಿ ವಿಜಯ
ಹರಿಣಾಭಿಸರಣ
ಹಂಸದಮಯಂತಿ

## ಗದ್ಯಪ್ರಬಂಧಗಳು, ಚಿತ್ರಗಳು, ಕಥೆಗಳು :

ರಾಮಾಚಾರಿಯ ನೆನಪು
ಧ್ವಜರಕ್ಷಣೆ ಮತ್ತು ಇತರ ಕಥೆಗಳು
ರಥಸಪ್ತಮಿ ಮತ್ತು ಇತರ ಚಿತ್ರಗಳು
ಈಚಲುಮರದ ಕೆಳಗೆ

## ಪದ್ಯಾನುವಾದಗಳು :

ಶ್ರೀ ಭಗವದ್ಗೀತೆಯ ಕನ್ನಡ ಪದ್ಯಾನುವಾದ
ಸಿರಿಬಾಯಿನುಡಿ